ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೦ ನವೆಂಬರ್ ೨೦೦೪ ಸಂಚಿಕೆ : ೧೧



ಅಕ್ಟೋಬರ್ ೨೩ರಂದು 'ಅಖಿಲ ಭಾರತ ವೀರಶೈವ ಮಹಾಸಭಾ ನಗರದ ಬಳ್ಳಾರಿ ರಸ್ತೆಯಲ್ಲಿ ನಿರ್ಮಿಸಲಿರುವ 'ವೀರಶೈವ ಭವನ' ಕಟ್ಟಡದ ಶಿಲಾನ್ಯಾಸವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ದಿವ್ಯ ಹಸ್ತದಿಂದ ನೆರವೇರಿಸಿದರು. ಈ ಸಂದರ್ಭದಲ್ಲಿ ಅಖಿಲ ಭಾರತ ವೀರಶೈವ ಮಹಾಸಭಾದ ಅಧ್ಯಕ್ಷ ಶ್ರೀ ಭೀಮಣ್ಣ ಖಂಡ್ರೆ, ವಿಧಾನಸಭೆ ವಿರೋಧ ಪಕ್ಷದ ನಾಯಕ ಶ್ರೀ ಬಿ.ಎಸ್. ಯಡಿಯೂರಪ್ಪ, ಶಾಸಕ ಶ್ರೀ ಎಸ್.ಎಸ್. ಪಾಟೀಲ್, ನಿವೃತ್ತ ಐ.ಎ.ಎಸ್. ಅಧಿಕಾರಿ ಶ್ರೀ ಬಿ.ಎಸ್. ಮುದ್ದಪ್ಪ, ಸಹಕಾರಿ ಧುರೀಣ ಶ್ರೀ ಬಿ.ಎಸ್. ಪರಮಶಿವಯ್ಯ ಹಾಗೂ ವೀರಶೈವ ಮಹಾಸಭೆಯ ಪ್ರಧಾನ ಕಾರ್ಯದರ್ಶಿ ಶ್ರೀ ಹೆಚ್.ವಿ. ನಾಗೇಂದ್ರಪ್ಪ ಅವರು ಉಪಸ್ಥಿತರಿದ್ದರು.



ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಹಸ್ತದಿಂದ 'ವೀರಶೈವ ಭವನ'ದ ಶಿಲಾನ್ಯಾಸ ಫಲಕದ ಅನಾವರಣ ನೆರವೇರಿತು.



ತುಮಕೂರಿನಲ್ಲಿ ನಡೆದ ರಾಜ್ಯಮಟ್ಟದ ಕುಂಬಾರರ ಮಹಾ ಸಮ್ಮೇಳನವನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಉಪ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಅವರು ಉದ್ಘಾಟಿಸಿದರು. ಚಿತ್ರದಲ್ಲಿ :ಶಾಸಕರಾದ ಶ್ರೀ ಕೆ.ಎನ್. ರಾಜಣ್ಣ, ಶ್ರೀ ಎಚ್. ನಿಂಗಪ್ಪ, ಶ್ರೀ ಡಿ. ನಾಗರಾಜಯ್ಯ ಮತ್ತು ಜಿಲ್ಲಾಧಿಕಾರಿ ಶ್ರೀ ಎಂ.ಬಿ. ದ್ಯಾಬೇರಿ ಮೊದಲಾದವರು.



ಮುಖಪುಟ
ಪರಮಪೂಜ್ಯ ಶ್ರೀ ಶ್ರೀಗಳವರು ವಿವಿಧ ಸಮಾರಂಭಗಳಲ್ಲಿ ಭಾಗವಹಿಸಿದ ಚಿತ್ರಗಳು

ಸಂಪಾದಕ
ಹೆಚ್.ವಿ. ವೀರಭದ್ರಯ್ಯ
☎ : 95816-2278052

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ
☎ : 95816-2283600

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
☎ : 95816-2282828
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪.
☎ : 95816-2282211

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೨೩೬೦೪೦೮೭

ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ
ಅವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೦ ನವೆಂಬರ್ ೨೦೦೪ ಸಂಚಿಕೆ : ೧೧

## ಒಳಪುಟಗಳಲ್ಲಿ..........



| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೧೦೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ಕನ್ನಡ ನಾಡು-ನುಡಿಗೆ ದುಡಿದವರು ....

"ಒಂದು ಭಾಷೆ ಬೆಳೆದರೆ ಅದನ್ನು ಆಡುವ ಜನರೂ ಬೆಳೆಯುತ್ತಾರೆ. ಭಾಷೆಯೊಂದಿಗೆ ಜನರೂ ಬೆಳೆಯುವಂತೆ, ಜನರೊಂದಿಗೆ ಭಾಷೆಯೂ ಬೆಳೆಯುತ್ತದೆ. ಜನರ ಕ್ರಿಯಾಶೀಲತೆಯೇ ಭಾಷೆಗೆ ಹೆಚ್ಚಿನ ಕ್ರಿಯಾಶೀಲತೆಯನ್ನು ತಂದು ಕೊಡುತ್ತದೆ" ಎನ್ನುತ್ತಾರೆ ಡಾ. ಪಾಟೀಲ ಪುಟ್ಟಪ್ಪನವರು. ಕನ್ನಡ ಮಾಹೇಶ್ವರನಿಷ್ಠೆ ಅವರದು. ಕನ್ನಡವನ್ನೇ ತಮ್ಮ ಪ್ರಾಣಜೀವಾಳ ವೆಂದು ನಂಬಿ ನಡೆದ ಮಹನೀಯರನ್ನು ರಾಜ್ಯೋತ್ಸವದ ಈ ತಿಂಗಳಿನಲ್ಲಿಯಷ್ಟೆ ನೆನಪಿಸಿಕೊಂಡರೆ ಸಾಲದು. ಅವರು ತೋರಿದ 'ಕನ್ನಡಪಥ'ದಲ್ಲಿ ಮುನ್ನಡೆಯಬೇಕಲ್ಲವೆ? ಶ್ರೀ ಎಚ್.ವಿ. ನಂಜುಂಡಯ್ಯನವರು, ಶ್ರೀ ಆರ್. ನರಸಿಂಹಾಚಾರ್ಯರು, ಶ್ರೀ ಕರ್ಪೂರ ಶ್ರೀನಿವಾಸರಾಯರು, ಶ್ರೀ ದೊಡ್ಡ ಶ್ರೀನಿವಾಸರಾಯರು, ಸರ್. ಕೆ.ಪಿ. ಪುಟ್ಟಣ್ಣ ಶೆಟ್ಟಿಯವರು, ಶ್ರೀ ಎಂ. ವೆಂಕಟಕೃಷ್ಣಯ್ಯನವರು, ಶ್ರೀ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳು, ಶ್ರೀ ಹೊಸಕೋಟೆ ಕೃಷ್ಣಶಾಸ್ತ್ರಿಗಳು, ಶ್ರೀ ಬೆನಗಲ್ ರಾಮ ರಾಯರು, ವಚನಶಾಸ್ತ್ರ ಪಿತಾಮಹ ಶ್ರೀ ಫ.ಗು. ಹಳಕಟ್ಟಿಯವರು, ಶ್ರೀ ಆರ್. ತಾತಾಚಾರ್ಯರು, ಆಚಾರ್ಯ ಶ್ರೀ ಬಿ.ಎಂ. ಶ್ರೀಕಂಠಯ್ಯನವರು, ಶ್ರೀ ಮಾಸ್ತಿ ವೆಂಕಟೇಶ ಐಯ್ಯಂಗಾರ್ ಅವರು, ಕನ್ನಡದ ಕುಲಪುರೋಹಿತ ಆಲೂರು ಶ್ರೀ ವೆಂಕಟರಾಯರು, ನಾಡೋಜ ಶ್ರೀ ಮುಳಿಯ ತಿಮ್ಮಯ್ಯನವರು, ಶ್ರೀ ಡಿ.ವಿ.ಜಿ.ಯವರು, ಶ್ರೀ ವೈ. ನಾಗೇಶಶಾಸ್ತ್ರಿಯವರು, ಶ್ರೀ ಪಂಜೆ ಮಂಗೇಶರಾಯರು, ಶ್ರೀ ಎನ್.ಎಸ್. ಸುಬ್ಬರಾಯರು, ಶ್ರೀ ಆರ್.ಆರ್. ದಿವಾಕರ ಅವರು, ಶ್ರೀ ಮುದವೀಡು ಕೃಷ್ಣರಾಯರು, ವ್ಯಾಕರಣ ತೀರ್ಥ ಶ್ರೀ ಚಂದ್ರಶೇಖರ ಶಾಸ್ತ್ರಿಗಳು, ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳು, ಶ್ರೀ ದ.ರಾ. ಬೇಂದ್ರೆ ಅವರು, ಶ್ರೀ ಶಿ.ಶಿ. ಬಸವನಾಳರು, ಶ್ರೀ ಟಿ.ಪಿ. ಕೈಲಾಸಂ ಅವರು, ಶ್ರೀ ಸಿ.ಕೆ. ವೆಂಕಟರಾಮಯ್ಯನವರು, ಶ್ರೀ ತಿ.ತಾ. ಶರ್ಮ ಅವರು, ಶ್ರೀ ರೆವರೆಂಡ್ ಉತ್ತಂಗಿ ಚೆನ್ನಪ್ಪನವರು, ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಅವರು, ರಾಷ್ಟ್ರಕವಿ ಶ್ರೀ ಎಂ. ಗೋವಿಂದಪೈಯವರು, ಶ್ರೀ ಶಿ.ಚ. ನಂದೀಮಠ ಅವರು, ಶ್ರೀ ವಿ. ಸೀತಾರಾಮಯ್ಯನವರು, ಕಡಲತೀರದ ಭಾರ್ಗವ ಕೆ. ಶ್ರೀ ಶಿವರಾಮಕಾರಂತ ಅವರು, ಶ್ರೀ ಶ್ರೀರಂಗರು, ರಾಷ್ಟ್ರಕವಿ ಡಾ. ಕುವೆಂಪು ಅವರು, ಡಾ. ವಿ.ಕೃ ಗೋಕಾಕರು, ಶ್ರೀ ಡಿ.ಎಲ್. ನರಸಿಂಹಾಚಾರ್ ಅವರು, ಶ್ರೀ ಅ.ನ.ಕೃ. ಅವರು, ಶ್ರೀ ಕೆ.ಜಿ. ಕುಂದಣಗಾರ ಅವರು, ಡಾ. ರಂ.ಶ್ರೀ. ಮುಗಳಿ ಅವರು, ಶ್ರೀ ಕಡೆಂಗೋಡ್ಲು ಶಂಕರಭಟ್ಟರು, ಶ್ರೀ ಆ.ನೇ. ಉಪಾಧ್ಯೆ ಅವರು, ಕನ್ನಡ ಕಟ್ಟಾಳು ಶ್ರೀ ದೇ. ಜವರೇಗೌಡರು, ಶ್ರೀಮತಿ ಜಯದೇವಿ ತಾಯಿ ಲಿಗಾಡೆಯವರು, ಶ್ರೀ ಎಸ್.ವಿ. ರಂಗಣ್ಣನವರು, ಶ್ರೀ ರಾಜರತ್ನಂ ಅವರು, ಶ್ರೀ ಗೋಪಾಲಕೃಷ್ಣ ಅಡಿಗರು, ಶ್ರೀ ಬಸವರಾಜ ಕಟ್ಟೀಮನಿ ಅವರು, ಶ್ರೀ ಪು.ತಿ. ನರಸಿಂಹಾಚಾರ್ ಅವರು, ಶ್ರೀ ಶಂ.ಬಾ. ಜೋಶಿ ಅವರು, ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರರು, ಶ್ರೀ ಎ.ಎನ್. ಮೂರ್ತಿರಾಯರು, ಡಾ. ಹಾ.ಮಾ. ನಾಯಕರು, ಡಾ. ಸಿದ್ಧಯ್ಯ ಪುರಾಣಿಕರು, ಶ್ರೀ ಆರ್.ಸಿ. ಹಿರೇಮಠರು, ಶ್ರೀ ಕೆ.ಎಸ್. ನರಸಿಂಹಸ್ವಾಮಿ ಅವರು, ಡಾ. ಜಿ.ಎಸ್. ಶಿವರುದ್ರಪ್ಪನವರು, ಶ್ರೀ ಸಿಂಪಿ ಲಿಂಗಣ್ಣನವರು, ಶ್ರೀ ಚದುರಂಗರು, ಶ್ರೀ ಎಚ್.ಎಲ್. ನಾಗೇಗೌಡರು, ಶ್ರೀ ಚನ್ನವೀರಕಣವಿಯವರು, ಶ್ರೀ ಕಯ್ಯಾರ ಕಿಞ್ಞಣ್ಣರೈಯವರು, ಡಾ. ಎಸ್.ಎಲ್. ಭೈರಪ್ಪನವರು, ಶ್ರೀಮತಿ ಶಾಂತಾದೇವಿ ಮಾಳವಾಡರು, ಶ್ರೀ ಯು.ಆರ್. ಅನಂತಮೂರ್ತಿ ಅವರು, ಸಂಶೋಧಕರತ್ನರೆನಿಸಿದ ಡಾ. ಎಂ. ಚಿದಾನಂದಮೂರ್ತಿಗಳು, ಡಾ. ಎಂ.ಎಂ. ಕಲಬುರ್ಗಿಯವರು, ಪುರುಷ ಸರಸ್ವತಿ ಎನಿಸಿದ ತೀ.ನಂ. ಶ್ರೀಯವರು, ಶಿವಚಿಂತಕ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು, ಡಾ. ಎಲ್. ಬಸವರಾಜು ಅವರು – ಈ ಮುಂತಾಗಿ ಅಸಂಖ್ಯಾತರಾದ ಕವಿಗಳು, ಸಾಹಿತಿಗಳು, ಕಲಾವಿದರು, ವಿಜ್ಞಾನಿಗಳು, ನ್ಯಾಯಾಧೀಶರು, ವೈದ್ಯರು, ಆಡಳಿತಗಾರರು, ಸಚಿವರು, ಶಾಸಕರು, ಕನ್ನಡಕ್ಕಾಗಿ ದೀಪದಂತೆ ಉರಿದಿದ್ದಾರೆ. "ಕರ್ನಾಟಕತ್ವ ಎಂದರೆ ಕೇವಲ ದೇಶಾಭಿಮಾನವಲ್ಲ, ಭಾಷಾಭಿಮಾನವಲ್ಲ, ಇತಿಹಾಸಾಭಿಮಾನವಲ್ಲ, ಇವೆಲ್ಲವುಗಳನ್ನು ಮೀರಿದ ಇವೆಲ್ಲವುಗಳನ್ನು ಒಳಗೊಂಡ ಪರಿಶುದ್ಧ ಭಾವನೆ" – ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಕನ್ನಡದಲ್ಲಿ ಕಾಲಕಾಲಕ್ಕೆ ಬಂದ ಪತ್ರಿಕೆಗಳು ಸಲ್ಲಿಸಿರುವ ಕನ್ನಡಾಭಿಮಾನವನ್ನು ಸ್ಮರಿಸುವಂತಹುದಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಪ್ರಾಧಿಕಾರ, ವಿವಿಧ ಅಕಾಡೆಮಿಗಳು ಕನ್ನಡದ ಅಭಿವೃದ್ಧಿಗಾಗಿ ಶ್ರಮಿಸುತ್ತಿವೆ. ಆಡಳಿತದಲ್ಲಿ ಕನ್ನಡ ಬಳಕೆಗಾಗಿ ಮುನ್ನೂರಕ್ಕೂ ಹೆಚ್ಚು ಆದೇಶಗಳು ಬಂದಿವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡಪರಕ್ಕಾಗಿ ಕೆಲಸಮಾಡುತ್ತಿದೆ. ಎಲ್ಲವೂ ನಿಜ. ಆದರೆ ಕನ್ನಡ ಏಕೆ ಪ್ರಕಾಶಿಸುತ್ತಿಲ್ಲ? ಕನ್ನಡಿಗರ ಅಭಿಮಾನ ಶೂನ್ಯತೆಯೇ ಅದಕ್ಕೆ ಕಾರಣವೆನ್ನದೆ ವಿಧಿಯಿಲ್ಲ. ರಾಜಧಾನಿ ಬೆಂಗಳೂರು ನಗರದಲ್ಲಿ ಕನ್ನಡ ಸೊರಗುತ್ತಿದೆ. ಕನ್ನಡದಲ್ಲಿ ಮಾತಾಡಲು ಕನ್ನಡಿಗರಿಗೆ ಹೈಬ್ರೀಡ್ ಕನ್ನಡಿಗರಿಗೆ ಅಬ್ಬಳಿಕೆ. ಕನ್ನಡ ಪರಿಸರವಿಲ್ಲ. ಕನ್ನಡ ಮಾತನಾಡುವವರು ಎರಡನೇ ದರ್ಜೆ ಪ್ರಜೆಗಳು. ಅನ್ಯರಲ್ಲ ಇದಕ್ಕೆ ಕಾರಣ ನಾವೇ, ಕನ್ನಡಿಗರೇ. ಆತ್ಮಾವಲೋಕನ ಮಾಡಿಕೊಳ್ಳಬೇಕು – ನಾವೆಷ್ಟು ಕನ್ನಡಿಗರಾಗಿದ್ದೇವೆ ಎಂದು.

ರಾಜ್ಯೋತ್ಸವವೆಂಬುದು ಜೀವನೋತ್ಸಾಹದ ದೀಪಾವಳಿಯಾದಾಗ ಕನ್ನಡೋತ್ಸವಕ್ಕೆ ದಾರಿಯಾದೀತು.

– ಸಂಪಾದಕ







## ವಿರಳರು

"ಕೂಡಲ ಸಂಗನ ಒಲಿಸಲು ಬಂದ ಪ್ರಸಾದ ಕಾಯವಾದರೂ" ಅದಕ್ಕೂ ಒಂದು ಧರ್ಮವಿದೆ. ಅದಕ್ಕೀಗ – ತೊಂಬತ್ತೇಳು ತುಂಬುತ್ತಿದೆ. ಅದು ಬಾಗುತ್ತಿದೆ. ನಡಿಗೆ ನಿಧಾನವಾಗುತ್ತಿದೆ. ಮೆಟ್ಟಿಲುಗಳನ್ನು ಹತ್ತುವಾಗ ಇಳಿಯುವಾಗ ಎಚ್ಚರವಹಿಸಬೇಕಾಗಿದೆ. ಇತ್ತೀಚೆಗೆ ಶ್ರೀಮಠದಲ್ಲಿ ಮೆಟ್ಟಿಲುಗಳಿರುವ ಒಂದೆರಡು ಕಡೆ – ಹಳೇಮಠ, ಅಡವೀ ಸ್ವಾಮಿಗಳ ಗದ್ದುಗೆ ಮುಂಭಾಗದಲ್ಲಿ ಆಸರೆ ಕಂಬಿಗಳನ್ನು ಹಾಕಿಸಬೇಕಾಯಿತು. ಶ್ರೀ ಕೃಷ್ಣಶೆಟ್ಟಿಯವರ ಪ್ರೀತಿಯ ಒತ್ತಾಯದ ಮೇರೆಗೆ. ಈಗ ಅಲ್ಲಿ ಮೆಟ್ಟಿಲುಗಳನ್ನು ಹತ್ತುವ ಇಳಿಯುವ ಶ್ರಮ ಅಷ್ಟಾಗಿ ಕಾಣುತ್ತಿಲ್ಲ. ಆಸರೆ ಕಂಬಿಗಳ ಮೇಲೆ ಒತ್ತಡ ಬೀಳುವುದರಿಂದ ಕಾಲುಗಳಿಗೆ ಆಯಾಸವಾಗುವುದಿಲ್ಲ. ಒಂದು ಚಿಕ್ಕ ಆಸರೆಯಿಂದ ಎಷ್ಟೊಂದು ಅನುಕೂಲವಾಗುತ್ತದೆ. ಶ್ರೀ ಕೃಷ್ಣಶೆಟ್ಟಿಯವರು ಆಂಧ್ರದ ಚಿತ್ತೂರಿನವರು. ಸಂಸ್ಥೆಯ ಸೇವಾ ಮಣಿಹದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ನಿಷ್ಕಾಮಚಿತ್ತರು. ಶ್ರೀಮಠದಲ್ಲಿರುವ ಮಕ್ಕಳಿಗೆಲ್ಲ, ಸಿಬ್ಬಂದಿ ವರ್ಗದವರಿಗೆಲ್ಲ ಚಿರಪರಿಚಿತರು. ಸಂಸ್ಥೆಯ ಮೂಲೆಮುಡುಕುಗಳನ್ನೆಲ್ಲ ಬಲ್ಲವರು. ಎಲ್ಲಿ ಏನಾಗಬೇಕು, ದುರಸ್ತಿಯಾಗಬೇಕು, ಸುಧಾರಣೆಯಾಗಬೇಕು, ವ್ಯವಸ್ಥೆ ಒಪ್ಪವಾಗಬೇಕು ಎಂಬ ಸೇವಾ ಜಪವನ್ನೇ ಮಾಡುತ್ತಿರುವ ನಿಸ್ಪೃಹ ಪ್ರವೃತ್ತಿಯುಳ್ಳ ಸರಳ ಸಂಪನ್ನರು. ಕಾಲದ ಬೆಲೆಯನ್ನು ಅರಿತು ನಡೆಯುವ ಇಂಗಿತ ಪ್ರಜ್ಞೆಯುಳ್ಳ ಪರಹಿತಸಂತೋಷಿಗಳು, ಹಿತಮಿತ ಮೃದುಭಾಷಿಗಳು. ಯಾರೊಬ್ಬರ ಬಳಿಯೂ ಅನಾವಶ್ಯಕವಾಗಿ ಮಾತು-ಕತೆಗಳಲ್ಲಿ ತೊಡಗದ ವಿವೇಕ ಅವರದು. ವಿದ್ಯಾರ್ಥಿಗಳು ವಾಸಮಾಡುವ ಕೊಠಡಿಗಳಲ್ಲಿ ಪಾಕ ಶಾಲೆಯಲ್ಲಿ, ಪ್ರಸಾದ ನಿಲಯದಲ್ಲಿ ಸ್ವಚ್ಛತೆಗೆ ಪ್ರಾಮುಖ್ಯತೆಯನ್ನು ಕೊಡುವಲ್ಲಿ ಅವರ ಆಸಕ್ತಿ ಅಸದಳವಾದುದು. ಮನೆಮಾತು ತೆಲುಗು, ಇಂಗ್ಲೀಷ್ ಭಾಷೆಯಲ್ಲಿ ಸಂಭಾಷಿಸಬಲ್ಲರು. ಕನ್ನಡವನ್ನು ಅರ್ಥಮಾಡಿಕೊಳ್ಳುತ್ತಾರೆ. ಅಲ್ಪ ಸ್ವಲ್ಪ ಕನ್ನಡದಲ್ಲಿ ಸಂಭಾಷಿಸುತ್ತಾರೆ. ಸಂಸ್ಥೆಯ ಸಿಬ್ಬಂದಿಯೊಂದಿಗೆ ಸಹಕರಿಸುತ್ತಾರೆ, ಸ್ಫೂರ್ತಿ ನೀಡುತ್ತಾರೆ, ಕಾರ್ಯಶೈಲಿ ಬದಲಾಗಬೇಕೆನ್ನುತ್ತಾರೆ. ಸಂಸ್ಥೆಗೆ ಸಂಬಂಧಿಸಿದ ವಸ್ತು ಅದು ಎಷ್ಟೇ ಚಿಕ್ಕದಾಗಿದ್ದರೂ ಅದನ್ನು ಜೋಪಾನವಾಗಿ ಸಂರಕ್ಷಿಸುವಲ್ಲಿ ತೀವ್ರಗಮನ ಹರಿಸುತ್ತಾರೆ. ಸಂಸ್ಥೆಯಲ್ಲಿ ಅನುಪಯೋಗಿ ವಸ್ತು (waste) ಗಳೆಂದು ಮೂಲೆಗೆ ಬಿಸುಟ್ಟಿದ್ದವುಗಳಿಗೆ ಮತ್ತು ಮುರಿದು ಹೋಗಿದ್ದು ಉಪಯೋಗಿಸದೇ ಇದ್ದ ಪೀಠೋಪಕರಣಗಳಿಗೆ 'ಕಾಯಕಲ್ಪ' ಮಾಡಿಸಿರುತ್ತಾರೆ. ಅವರೆಂದೂ ಸ್ವಂತಕ್ಕೆ ಸಂಸ್ಥೆಯ ದೂರವಾಣಿಗಳನ್ನು ಉಪಯೋಗಿಸಿಲ್ಲ. ಒಂದು ವೇಳೆ ಅನಿವಾರ್ಯವಿದ್ದರೆ ಶ್ರೀಮಠದಲ್ಲಿರುವ ಎಸ್.ಟಿ.ಡಿ. ಕೇಂದ್ರಗಳನ್ನು ಸಂಪರ್ಕಿಸುತ್ತಾರೆ. ವಿದ್ಯಾರ್ಥಿಗಳು ದೊರೆತಿರುವ ಅವಕಾಶವನ್ನು, ಕಾಲವನ್ನು ಅಪವ್ಯಯ ಮಾಡಿಕೊಳ್ಳಬಾರದು ಎಂದು ಹಿತವಚನ ಹೇಳುತ್ತಾರೆ. ನಮ್ಮೊಂದಿಗೆ ಆಗಬೇಕಾದ ಅಗತ್ಯ ಕೆಲಸಕಾರ್ಯಗಳ ಸಮಾಲೋಚನೆ ನಡೆಸುತ್ತಾರೆ. ಆ ಸಂದರ್ಭಗಳಲ್ಲಿಯೂ ಹೆಚ್ಚು ಮಾತಿಲ್ಲ. ಅಗತ್ಯಕ್ಕೆಷ್ಟು ಬೇಕೋ ಅಷ್ಟೆ ಮಾತುಗಳು, ಸಲಹೆಗಳು, ತಮಗೆ ಬೇಕಾದ ಆದೇಶಗಳನ್ನಷ್ಟೆ ಪಡೆದುಕೊಳ್ಳುವ ಶಿಸ್ತು ಅವರದ್ದು. ಅಪರೂಪದ ವ್ಯಕ್ತಿಗಳು. 'ಎಲೆ ಮರೆಯ ಹೂವು' ಎಂಬ ನಾಣ್ಣುಡಿಗೆ ನೇರ ನಿದರ್ಶನವಾಗಿದ್ದಾರೆ. ಪ್ರಸಂಗವೊಂದನ್ನು ಉದಾಹರಿಸಬೇಕಿಲ್ಲ. ಶ್ರೀಮಠದ ಗ್ರಾಮಾಂತರ ಬಸವ ಜಯಂತಿ ಯೋಜನೆಯ ಪ್ರಮುಖವಾದ ನಾಟಕದ ತಾಲೀಮು (ರಿ ಹರ್ಸಲ್) ಸಂಸ್ಥೆಯಲ್ಲಿ ನಡೆಯುತ್ತಿರುತ್ತದೆ. ಸಂಗೀತದ ಮಾಸ್ಟರ್ ಕುಳಿತುಕೊಳ್ಳುವ ಕುರ್ಚಿಯ ಕಾಲುಗಳು ಹಾರ್ಮೋನಿಯಂ ಪೆಟ್ಟಿಗೆಯ ಎತ್ತರಕ್ಕೆ ಸರಿಬರದಿರುವುದನ್ನು ಮನಗಂಡ ಶ್ರೀ ಶೆಟ್ಟರು ಆ ಕುರ್ಚಿಯ ಕಾಲುಗಳನ್ನು ಎತ್ತರಿಸಿದುದನ್ನು ತಿಳಿದಾಗ ಅದೆಂತಹ ವೀಕ್ಷಣಪ್ರಜ್ಞೆ ಶ್ರೀಯುತರು ಎನಿಸಿತು. ಇಂತಹ ಹಲವಾರು ಸೇವಾ ಸತ್ಕಾರ್ಯಗಳ ಸೂತ್ರಧಾರಿಯಾಗಿರುವ ಸಂಭಾವಿತ ಶ್ರೀ ಕೃಷ್ಣಶೆಟ್ಟರು (ಆಂಧ್ರದ ತಾತನೆಂದೇ ಚಿರಪರಿಚಿತರಾಗಿರುವ) ಶ್ರೀಮಠದ ಸೇವಾಮಣಿಹದಲ್ಲಿ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುತ್ತಿರುವ ವಿರಳರಲ್ಲಿ ಅತಿವಿರಳರಾಗಿರುವುದು ಅಭಿಮಾನವನ್ನುಂಟು ಮಾಡಿದೆ.

*

ॐ



# ಶ್ರೀ ಸಿದ್ಧಲಿಂಗೇಶ್ವರ ವಚನ

*ಮನಸಿನ ಸಂಶಯ ಕನಸಿನ ಭೂತವಾಗಿ ಕಾಡುವುದು ನೋಡಾ*
*ಮನಸಿನ ಸಂಶಯವಳಿದರೆ, ಕನಸಿನ ಕಾಟ ಬಿಟ್ಟೋಡಿತ್ತು ಕಾಣಾ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ.*

ನಾನು ಬ್ರಹ್ಮ ಸ್ವರೂಪನು ಅಹುದೋ ಅಲ್ಲವೋ ಎಂಬ ಮನಸ್ಸಿನ ಸಂಕಲ್ಪವೆ ಮಿಥ್ಯಾಭೂತವಾಗಿ ಕಾಡುತ್ತಿದೆ. ನಾನು ಬ್ರಹ್ಮ ಸ್ವರೂಪನು ಅಹುದೋ ಅಲ್ಲವೋ ಎಂಬ ಸಂಕಲ್ಪ ಭ್ರಾಂತಿ ಶಿವಜ್ಞಾನದಿಂದ ನಷ್ಟವಾಗಿ, ತನ್ನ ಆತ್ಮಜ್ಞಾನದಿಂದ ಶಿವತತ್ವ ಸ್ವರೂಪನೆಂದು ತಿಳಿದಾಗ ಮಿಥ್ಯಾ ಸ್ವರೂಪವಾದ ಅಜ್ಞಾನವು ತೊಲಗಿ, ಸೂರ್ಯೋದಯಕ್ಕೆ ಮಂಜು ಹರಿದು ಹೋಗುವಂತೆ ನಷ್ಟವಾಗುತ್ತದೆ ಎಂಬುದು ವಚನದ ಅರ್ಥದೀಪ್ತಿ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀವಾಣಿ

ದೇಶದಲ್ಲಿ ಬಹಳ ಮಂದಿ ಕಷ್ಟ ಅನುಭವಿಸುವಾಗ ಶ್ರೀಮಂತರು ಕಡ್ಡಾಯವಾಗಿ ಸ್ವಯಂಪ್ರೇರಿತರಾಗಿ ಮುಂದೆ ಬಂದು ಬಡವರಿಗೆ ಸೇವೆ ಮಾಡುವುದು ಅವರ ಕರ್ತವ್ಯ. ತ್ಯಾಗ, ಸೇವೆ ಎಂದಾಕ್ಷಣವೇ ಸರ್ವಸ್ವವನ್ನೂ ನೀಡಿ ಬಿಕಾರಿಗಳಾಗಿ ಬೀದಿ ಪಾಲಾಗಬೇಕು ಎಂದರ್ಥವಲ್ಲ, ತಾವು ಉಂಡು ತಿಂದು, ತಮ್ಮ ಕೈಲಾದಷ್ಟನ್ನು ಇತರರಿಗೆ ಬಿಡುಗೈನಿಂದ ನೀಡಿದರೆ ಸಾಕು, ಅದೇ ಸೇವೆ. ಕಾಲ ಬದಲಾವಣೆಯಾಗುತ್ತಿದೆ. ಉತ್ತಮ ಸ್ಥಾನದಲ್ಲಿರುವವರು ಹಳ್ಳಿಗರ, ಬಡವರ, ದೀನದಲಿತರ ಉದ್ಧಾರಕ್ಕೆ ಮುಂದೆ ಬರಬೇಕು, ಇಲ್ಲದೆ ಹೋದರೆ ಸಾಮಾನ್ಯ ಜನರ ಹೃದಯ ನೊಂದು ಬೆಂದು ಕ್ರಾಂತಿಯಾದೀತು, ರಕ್ತ ಹರಿದೀತು. ಸ್ವಾರ್ಥ ಮುಂದುವರಿದರೆ ಮಹಾವಿಪತ್ತು ಸಂಭವಿಸೀತು.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

''ಆಸೆ ಅರಸಗುಂಟು ಈಶ ಭಕ್ತರಿಗುಂಟೆ
ರೋಷವುಂಟೆ ಶಿವಶರಣರಿಗೆ'' । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಗೆ ಬಡತನವೆ ನಿತ್ಯಗೆ ಮರಣವೆ?
ಮುಕ್ತಿ ಮುಖದಲ್ಲಿ ಮುಸುಕಿಹುದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಡೆಬೇಕು ನುಡಿವಗೆ ನುಡಿಬೇಕು ನಡೆವಗೆ
ನಡೆ ನುಡಿ ಎರಡು ಶಿವ ಶರಣರಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾಡುವ ಮಾಟದೊಳು ಮಹವನು ಕಂಡಿರುವ
ಮಾಡಿರುವೆ ಕೈಲಾಸ ಈ ಧರೆಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶೀಲಸಂಪನ್ನನೆ ಸೇವಾ ಸಿರಿವಂತನೆ
ದಾಸೋಹದ ದೊರೆಯೆ ಶಿವ ಸಿರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಗನವ ಮೀರಿದತರುಮರವನಾ ಕಾಣೆ
ಜಗದೊಳಗೆ ಸರಿಕಾಣೆ ನಾ ನಿಮಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಂದದೆ ಕುಂದದೆ ತೊಂಬತ್ತು ವರುಷಗಳ
ತುಂಬಿ ತುಳುಕದೆ ನಡೆದೆ ಮೇಲ್ಗೈದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನೆ ಮನೆಯ ಮಠಮಾಡಿ ಮನವ ಲಿಂಗಮಾಡಿ
ಮನದ ಮೈಲಿಗೆ ತೊಳೆವ ಮಹಿಮನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಡವರೆ ಶರಣರು ದೃಢಮನದ ಹಿರಿಯರು
ಕಡುಭಕ್ತ ವಿನಯರು ಎಂದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರುಳಿಲ್ಲದ ಕಲಿಗಳ ಮನೆಗಳ ಬೆಳಗಿದೆ
ಕರುಣಾಳು ಬೆಳಕು ಎನಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥''

– ಹೆಚ್.ವಿ. ವೀರಭದ್ರಯ್ಯ







# ಕನ್ನಡ ನಾಡು-ನುಡಿ

– ಟಿ.ಆರ್. ಮಹಾದೇವಯ್ಯ
ಸದಸ್ಯರು,
ಕರ್ನಾಟಕ ಭಾಷಾ ಆಯೋಗ,
ಕರ್ನಾಟಕ ಸರ್ಕಾರ.

ಕನ್ನಡ ನಾಡಿಗೆ ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವಿದೆ. ಭವ್ಯ ಪರಂಪರೆಯಿದೆ. ಭಾರತದಲ್ಲೇ ಅತ್ಯುಜ್ವಲವಾದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸವಿದೆ. ಮೌರ್ಯರು, ಶಾತವಾಹನರು, ಗಂಗರು, ಚಾಳುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಕೆಳದಿ ಅರಸರು ಮೊದಲಾದ ರಾಜವಂಶದವರು ನಾಡಿನ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದಂತೆ, ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ ಮೊದಲಾದ ಕ್ಷೇತ್ರಗಳನ್ನು ಶ್ರೀಮಂತಗೊಳಿಸಲು ನಮ್ಮ ಕವಿಗಳು, ಕಲಾವಿದರು, ರಾಜಕೀಯ ಮುತ್ಸದ್ದಿಗಳು, ದಾರ್ಶನಿಕರು ಅತ್ಯಮೂಲ್ಯ ಸೇವೆ ಸಲ್ಲಿಸಿದ್ದಾರೆ. ಅವರು ಬಿಟ್ಟು ಹೋಗಿರುವ ಈ ಭವ್ಯ ಪರಂಪರೆಯನ್ನು ಮತ್ತಷ್ಟು ಉಜ್ವಲಗೊಳಿಸುವ ಹೊಣೆಗಾರಿಕೆ ನಮ್ಮೆಲ್ಲರ ಮೇಲಿದೆ.

**ಕ**ನ್ನಡನಾಡು ದಕ್ಷಿಣ ಭಾರತದಲ್ಲಿ ಕಾವೇರಿಯಿಂದ ಗೋದಾವರಿ ನದಿಯವರೆಗೆ ಹಬ್ಬಿದ ದೇಶ. ಬಿಜಾಪುರ ಜಿಲ್ಲೆಯ ಪಟ್ಟದಕಲ್ಲು, ರಾಯಚೂರು ಜಿಲ್ಲೆಯ ಕೊಪ್ಪಳ, (ಈಗ ಕೊಪ್ಪಳ ಪ್ರತ್ಯೇಕ ಜಿಲ್ಲೆಯಾಗಿದೆ) ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರ ಮತ್ತು ಬೆಳಗಾವಿ ಜಿಲ್ಲೆಯ ಒಂಕುಂದ – ಇವುಗಳ ನಡುವೆಯಿದ್ದ ಪ್ರದೇಶವೇ ತಿರುಳ್ಗನ್ನಡ ನಾಡು ಎಂದು ಕವಿರಾಜಮಾರ್ಗದಲ್ಲಿ ವಿವರವಿದೆ. ಕನ್ನಡ ನುಡಿಯನ್ನು ಮಾತನಾಡುವ ಜನರು ವಾಸ ಮಾಡುತ್ತಿರುವ ಈ ಭೂಭಾಗವನ್ನು ಕರುನಾಡು, ಕರಿನಾಡು, ಕಂನಾಡು, ಕರ್ನಾಟಕ ಎಂದು ಮುಂತಾಗಿ ಕರೆಯಲಾಗಿದೆ. ಅದನ್ನು ಹಾಗೆ ಕರೆಯಲು ಕಾರಣದ ವಿಶ್ಲೇಷಣೆ ಹೀಗಿದೆ :

### *ಕರುನಾಡು*

'ಕರು' ಎಂದರೆ ಎತ್ತರ. ಎತ್ತರದ ನಾಡು. ದಖಿನ್ ಪ್ರಸ್ಥಭೂಮಿಯಿ ಮೇಲೆ ಇರುವ ಈ ದೇಶ ಸಮುದ್ರಮಟ್ಟಕ್ಕಿಂತ ಸಾಕಷ್ಟು ಎತ್ತರದಲ್ಲಿದೆ. 'ಕರು' ಪದಕ್ಕೆ ದೊಡ್ಡ, ಮಹಾ ಎಂಬರ್ಥವೂ ಉಂಟು. ನಾಡು ಮಾತ್ರ ಎತ್ತರವಲ್ಲ, ಅಲ್ಲಿ ಬಾಳುವ ಜನರೂ ಉನ್ನತರು, ಉಜ್ವಲ ಸಂಸ್ಕೃತಿವಂತರು ಎಂದರ್ಥ.

### *ಕರ್‌ನಾಡು, ಕರಿನಾಡು*

ಕಪ್ಪುಮಣ್ಣಿನ ಭೂಮಿಯುಳ್ಳ ನಾಡು. ಅಂದರೆ ಫಲವತ್ತಾದ ಎರೆಭೂಮಿಯಿಂದ ಕೂಡಿದ ದೇಶ. ಕಪ್ಪು ಇಲ್ಲಿ ಫಲವತ್ತಿನ ಸಂಕೇತ. ಹುಲುಸಾದ ಬೆಳೆ ಸಿರಿಯ ನೀಡುವ ಭೂಮಿಯುಳ್ಳ ನಾಡು. ಈ ನೆಲದಲ್ಲಿ ಅರಳಿದ ಚೇತನಗಳೂ ಸಹ ಸಂಪನ್ನರು. ಮನುಜ ಮಾಂದಾತರು ಎಂದು ಅರ್ಥೈಸಬಹುದು.

### *ಕಂನಾಡು*

ಕಮ್ಮಿತ್ತಾದ ದೇಶ. ಅಂದರೆ ಸುವಾಸನೆಭರಿತ ನಾಡು. ಈ ದೇಶದಲ್ಲಿ ಶ್ರೇಷ್ಠವಾದ ಶ್ರೀಗಂಧ ಬೆಳೆಯುತ್ತದೆ. ಹೂವುಗಳಲ್ಲಿ ಶ್ರೇಷ್ಠವಾದ ಮಲ್ಲಿಗೆ, ತಾವರೆಗಳು, ಹಣ್ಣುಗಳಲ್ಲಿ ಶ್ರೇಷ್ಠವಾದ ಮಾವುಗಳು ಇಲ್ಲಿ ಬೆಳೆಯುತ್ತವೆ. ಆದ್ದರಿಂದ ಇಲ್ಲಿನರುಗಂಪು ತುಂಬಿ ಸೂಸುತ್ತದೆ. ಅದರಂತೆಯೇ ಈ ನೆಲದಲ್ಲಿ ಹುಟ್ಟಿ ಬೆಳೆದ ಜನರೂ ಸಹ ತಮ್ಮ ಗುಣ ಮೌಲ್ಯಗಳಿಂದ, ಅನುಕರಣೀಯ ಆದರ್ಶ ಬದುಕಿನಿಂದ ಕೀರ್ತಿ ಪರಿಮಳವನ್ನು ಹರಡಿದ್ದಾರೆ ಎಂದರ್ಥ.

### *ಕರ್ನಾಟಕ*

ಸಂಸ್ಕೃತದ ಈ ಪದಕ್ಕೆ ''ಕರ್ಣೇಷು ಅಟತಿ ಇತಿ ಕರ್ಣಾಟಃ'' ಎಂದು ನಿಷ್ಪತ್ತಿ ಹೇಳಿದೆ. ಅಂದರೆ ಯಾವ ದೇಶದ ಕೀರ್ತಿ ಎಲ್ಲರ ಕಿವಿಯಲ್ಲೂ ಮೊಳಗುತ್ತಿರುವುದೋ ಆ ದೇಶ ಎಂದರ್ಥ. ಕನ್ನಡನಾಡಿನ ಅಗ್ಗಳಿಕೆ ಎಷ್ಟಿತ್ತೆಂದರೆ ಎಲ್ಲರೂ ಅದರ ಹಿರಿಮೆಯನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದರು – ಇಂಥ ಹಲವಾರು ಅರ್ಥ ವಿವರಣೆಗಳು ನಮ್ಮ ನಾಡಿನ ಹೆಸರಿನ ಬಗ್ಗೆ ಇವೆ. ಈ ನಾಡಿಗೆ ಕರೆದಿರುವ ಹೆಸರುಗಳೆಲ್ಲವೂ ಅನ್ವರ್ಥಕ ನಾಮಗಳೇ. ಕನ್ನಡನಾಡಿನ ಮೇಲ್ಮೈ ಲಕ್ಷಣಗಳು. ಅಲ್ಲಿ ಅರಳಿ ಬಾಳಿದ ವಿವಿಧ ಸಂಸ್ಕೃತಿಗಳು, ನಾಡವರ ಆದರ್ಶದ ಬದುಕು ನಾಡಿನ ಹೆಸರಿನ ಯಥಾರ್ಥತೆಯನ್ನು ಸಾರುವಂತಿದೆ.

ನಮ್ಮ ನಾಡಿಗೆ ಎರಡು ಸಹಸ್ರವರ್ಷಗಳಿಗಿಂತಲೂ ಹೆಚ್ಚಿನ ಭವ್ಯ ಇತಿಹಾಸವಿದೆ. ಕರ್ನಾಟಕವನ್ನು ಆಳಿದ ರಾಜಮನೆತನಗಳು ನಾಡಿನ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿರುವುದನ್ನು ಇತಿಹಾಸ ದಾಖಲಿಸಿದೆ. ಕರ್ನಾಟಕ ಸಂಪರ್ಕ ಹೊಂದಿ ಅಧಿಕಾರ ನಡೆಸಿದ ಪ್ರಥಮ ರಾಜವಂಶವೆಂದರೆ ಮೌರ್ಯರು, ಅನಂತರ ಶಾತವಾಹನು, ಚುಟುಗಳು, ಬಾಣರು, ಅಳುಪುರು, ಸೇಂದ್ರರು, ಪುನ್ನಾಡರು, ಗಂಗರು, ಚಾಳುಕ್ಯರು, ರಾಷ್ಟ್ರಕೂಟರು, ಹೊಯ್ಸಳರು,

ವಿಜಯನಗರದ ಅರಸರು, ಕೆಳದಿಯ ಅರಸರು, ಕೊನೆಗೆ ಯದುವಂಶದವರು ಈ ನಾಡನ್ನು ಆಳಿದರು. ಹೀಗೆ ವಿವಿಧ ರಾಜವಂಶದವರು ಈ ನಾಡನ್ನು ಆಳಿದರು. ಹೀಗೆ ವಿವಿಧ ರಾಜವಂಶದವರ ಆಳ್ವಿಕೆಗೆ ಒಳಪಡುತ್ತಾ ಬಂದಿದ್ದರೂ ನಮ್ಮ ನಾಡು ತನ್ನ ಅಖಂಡತೆಯನ್ನು, ಸಾಂಸ್ಕೃತಿಕ ಐಕ್ಯತೆಯನ್ನು ಉಳಿಸಿಕೊಂಡು ಬಂದಿದೆ.

ಆನಂತರದ ವರ್ಷಗಳಲ್ಲಿ ಕನ್ನಡ ನಾಡಿನ ಪ್ರದೇಶಗಳು ಬೇರೆ ಬೇರೆ ಪ್ರಾಂತಗಳಿಗೆ ಸೇರಿ ಹರಿದು ಹಂಚಿ ಹೋಯಿತು. ಬ್ರಿಟಿಷರ ಆಳ್ವಿಕೆಯಲ್ಲಿ ಅದು ಮತ್ತಷ್ಟು ಛಿದ್ರವಾಗಿ ಹೋಯಿತು. ತಮಿಳುನಾಡು, ಕೇರಳ, ಆಂಧ್ರಪ್ರದೇಶ, ಮಹಾರಾಷ್ಟ್ರ ರಾಜ್ಯಗಳಿಗೆ ಸೇರಿದ ಕನ್ನಡ ನೆಲದ ಜನರು ತೊಂದರೆಗೊಳಗಾದರು. ಆಳ್ವಿಕೆಯ ಕೃಪಾಛತ್ರದಡಿ ಬಾಳಬೇಕೆಂಬ ಬಯಕೆ ತೀವ್ರವಾಗಿ ಏಕೀಕರಣದ ಹೋರಾಟ ನಡೆಯಿತು. ಸ್ವಾತಂತ್ರ್ಯಾನಂತರ ಭಾಷಾವಾರು ಪ್ರಾಂತ ಪುನರ್ವಿಂಗಡಣೆಯಲ್ಲಿ ವಿಶಾಲರಾಜ್ಯ ನಿರ್ಮಾಣವಾಗಿ ನಾಡು ಒಂದಾಯಿತು. ಇಷ್ಟಾದರೂ ನಮ್ಮ ನಾಡಿಗೆ ಸೇರಬೇಕಾದ ಅನೇಕ ಭಾಗಗಳು ಹಾಗೇ ಉಳಿದಿವೆ. ಮಹಾಜನ ಆಯೋಗದ ವರದಿ ಜಾರಿಗೆ ಬಂದಿಲ್ಲ. ಗಡಿ ಹೊಂದಾಣಿಕೆಗಳ ಬಗ್ಗೆ ಪೂರ್ಣ ತೀರ್ಮಾನವಾಗಿಲ್ಲ.

ಕನ್ನಡನಾಡನ್ನು ಕುರಿತು ನಮ್ಮ ಕವಿಗಳು ವಿವಿಧ ರೀತಿಯಲ್ಲಿ ಬಣ್ಣಿಸಿದ್ದಾರೆ. ಬನವಾಸಿಯನ್ನು ವರ್ಣಿಸುವ ಸಂದರ್ಭದಲ್ಲಿ ಪಂಪಕವಿ ***'ಆರಂಕುಶ ವಿಟ್ಟೊಡಂ ನೆನೆವುದೆನ್ನಮನಂ ಬನವಾಸಿಯಂ'*** ಎಂದು ನಾಡಪ್ರೇಮವನ್ನು ವ್ಯಕ್ತಗೊಳಿಸಿದ್ದಾನೆ. ಹಲವು ನಾಲಗೆಯುಳ್ಳ ಆದಿಶೇಷನೇ ಕನ್ನಡ ನಾಡನ್ನು ವರ್ಣಿಸಲು ದಣಿಯುತ್ತಾನೆ. ಇನ್ನು ಸಾಮಾನ್ಯನಾದ ನಾನು ಹೇಗೆ ಬಣ್ಣಿಸಲಿ ಎಂಬ ಉದ್ಗಾರದೊಡನೆ ಕವಿ ಆಂಡಯ್ಯ **'ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು'** ಎಂದಿದ್ದಾನೆ. ಅದರಂತೆ ನಾಡವರ ಬಗ್ಗೆಯೂ ನಮ್ಮ ಕವಿಗಳು ಮನದುಂಬಿ ಹೇಳಿದ್ದಾರೆ. ಕನ್ನಡಿಗರು ಪದಗಳನ್ನು ತಿಳಿದು ಮಾತಿನಲ್ಲಿ ಬಳಸುತ್ತಾರೆ. ಮತ್ತು ಆಡಿದ ಮಾತನ್ನು ವಿಚಾರ ಮಾಡಲು ಸಹ ಸಮರ್ಥರಾಗಿ ತಮ್ಮ ಚದುರನ್ನು ಮೆರೆದಿದ್ದಾರೆ. ಅವರು ಎಂಥ ನಿಪುಣರೆಂದರೆ ಉದ್ದೇಶಪೂರ್ವಕ ಅಭ್ಯಾಸ ಮಾಡದೆ ಕಾವ್ಯ ಕಟ್ಟಿ ಹಾಡುವ ಸಾಮರ್ಥ್ಯವುಳ್ಳವರು ಎಂದು 'ಕವಿರಾಜಮಾರ್ಗ' ಮೆಚ್ಚಿಗೆ ಮಾತನ್ನಾಡಿದರೆ, ಶಾಸನಗಳು ಕನ್ನಡಿಗರ ಗುಣಗಣಗಳನ್ನು ಮಾಡಿ ಹೊಗಳಿವೆ. ಕನ್ನಡಿಗರು ಪರಹಿತರು, ನುಡಿದು ತಪ್ಪದವರು, ಜ್ಞಾನನಿಧಿಗಳು, ಧರ್ಮಕ್ಕೆ ಆಗರವಾದವರು. ಗಂಡಸರು ಮನ್ಮಥ, ನಳರಂತೆ ಚೆನ್ನಿಗರು, ಶತ್ರು ಸೈನ್ಯವನ್ನು ಹಿಮ್ಮೆಟ್ಟಿಸುವಲ್ಲಿ ಷಣ್ಮುಖ-ಅರ್ಜುನರು, ಹೆಂಗಸರು ರತಿ, ರಂಭೆಯರಂತೆ ರೂಪಸಿಯರು, ಸರಸ್ವತಿ, ಲಕ್ಷ್ಮಿಯರಂತೆ ನುಡಿ-ಸಿರಿಯ ಶೋಭಿತೆಯರು ಎಂದು ಕೊಂಡಾಡಿದೆ.

ಇಂಥ ಸತ್ವಪೂರ್ಣವಾದ ಭಾಷೆಯಿಂದ ಮೂಡಿರುವ ಕನ್ನಡ ಸಾಹಿತ್ಯವು ಸಮೃದ್ಧವಾಗಿದೆ. ನಮ್ಮ ಕವಿಗಳು ಜನರಿಗೆ 'ಇದು ಪಾಪ. ಇದು ಪುಣ್ಯ; ಇದು ಹಿತರೂಪದ್ದು, ಇದು ಅಹಿತ ಪ್ರಕಾರದ್ದು, ಇದು ಸುಖ, ಇದು ದುಃಖವನ್ನು ಉಂಟು ಮಾಡುವಂಥದ್ದು ನೋಡಿ' ಎಂದು ತಿಳಿವನ್ನು ತಿದ್ದುವ ಉತ್ತಮೋತ್ತಮ ಕಾವ್ಯಗಳನ್ನು ನೀಡಿದ್ದಾರೆ ಎಂದಿದ್ದಾನೆ ಕವಿರಾಜಮಾರ್ಗಕಾರ.

ಹಲ್ಮಿಡಿ ಮತ್ತು ಬಾದಾಮಿ ಶಾಸನಗಳು ಕನ್ನಡ ಸಾಹಿತ್ಯದ ಮೊದಲ ಆಕರಗಳು. 'ಕವಿರಾಜಮಾರ್ಗ' ನಮಗೆ ದೊರಕಿರುವ ಮೊದಲ ಗ್ರಂಥ. ಇವನ್ನು ನೋಡಿದರೆ ಆ ವೇಳೆಗೆ ಕನ್ನಡ ಸಾಹಿತ್ಯ ಸಾಕಷ್ಟು ಪ್ರೌಢವಾಗಿ ಬೆಳೆದಿತ್ತೆಂಬುದು ಸ್ಪಷ್ಟವಾಗುತ್ತದೆ. ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಅಧ್ಯಯನದ ದೃಷ್ಟಿಯಿಂದ ಪಂಪಯುಗ, ವಚನಯುಗ, ಹರಿಹರಯುಗ, ಕುಮಾರವ್ಯಾಸ ಯುಗ, ಆಧುನಿಕಯುಗ ಎಂದು ಭಾವಿಸಲಾಗಿದೆ. ಸಾಹಿತ್ಯ ಪ್ರಕಾರಗಳ ದೃಷ್ಟಿಯಿಂದ ಚಂಪೂ, ವಚನ-ಸ್ವರವಚನಗಳ, ರಗಳೆ, ಷಟ್ಪದಿ, ಸಾಂಗತ್ಯ-ತ್ರಿಪದಿ, ಭಾವಗೀತೆ, ಗದ್ಯಸಾಹಿತ್ಯ ಎಂದೂ ಸಹ ವಿಭಾಗಿಸಿ ನಮ್ಮ ಸಾಹಿತ್ಯದ ಎತ್ತರ-ಬಿತ್ತರಗಳನ್ನೂ, ವ್ಯಾಪ್ತಿದೀಪ್ತಿಗಳನ್ನು ಅಧ್ಯಯನ ಮಾಡಲಾಗುತ್ತಿದೆ.

ನಮ್ಮಲ್ಲಿ ಅನೇಕ ಮಹಾಕವಿಗಳು ನೂರ್ಕಾಲ ನಿಲ್ಲುವಂಥ ಉತ್ತಮ ಕಾವ್ಯಗಳನ್ನು ರಚಿಸಿಕೊಟ್ಟಿದ್ದಾರೆ. ಅವು ಕನ್ನಡಕ್ಕೆ ಕೋಡು ಮೂಡಿಸಿ ಅದರ ಅಂತಃಸತ್ವವನ್ನು ಪ್ರಕಟಪಡಿಸಿವೆ. ಅಂಥ ಶ್ರೇಷ್ಠ ಕೃತಿಗಳಲ್ಲಿ ಕೆಲವನ್ನಾದರೂ ಇಲ್ಲಿ ಉಲ್ಲೇಖಿಸಬೇಕು. ಪಂಪನ 'ವಿಕ್ರಮಾರ್ಜುನ ವಿಜಯ', ರನ್ನನ 'ಸಾಹಸಭೀಜ ವಿಜಯ' ಚಂಪೂ ಸಂಪ್ರದಾಯದ ಕೃತಿಗಳು. ಶಿವಶರಣರ ವಚನಗಳು ಸಾಹಿತ್ಯವೆನಿಸಿದವು. ಹರಿಹರನ ರಗಳೆ ಕಾವ್ಯಗಳು, ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಯಾವುದೇ ಭಾಷೆ ಹೆಮ್ಮೆಪಡಬಹುದಾದ ಕೃತಿರತ್ನಗಳು. ರಾಜರನ್ನು ಹೊಗಳದೆ ದೇವನನ್ನು, ಅವನ ಭಕ್ತರನ್ನು ಕುರಿತು ಬರೆಯುವ, ಜನ ಬದುಕಲೆಂಬ ಸದಾಶಯದಿಂದ ಕೃತಿ ರಚಿಸುವ ಪರಿಪಾಠ ಆರಂಭವಾಯಿತು. ರುದ್ರಭಟ್ಟನ 'ಜಗನ್ನಾಥ ವಿಜಯ', ಜನ್ನನ 'ಯಶೋಧರ ಚರಿತೆ', ಕುಮಾರವ್ಯಾಸನ 'ಕರ್ನಾಟಕ ಭಾಷಾ ಕಥಾಮಂಜರಿ', ಲಕ್ಷ್ಮೀಶನ 'ಜೈಮಿನಿ ಭಾರತ', ಜನಮನವನ್ನಾಳಿದವು. ಸಾಹಿತ್ಯದೊಡನೆ ಸಂಗೀತವನ್ನು ಬೆರೆಸಿ ಕೀರ್ತನೆಗಳ ಮೂಲಕ ಜನರಬಳಿ ಸಾರಿತು ಹರಿದಾಸ ಸಾಹಿತ್ಯ 'ಸೋಮೇಶ್ವರ ಶತಕ', 'ರತ್ನಾಕರಾಧೀಶ್ವರ ಶತಕ', ಹರಿಹರನ ಶತಕಗಳು ಜನರ ನಾಲಗೆಯ ಮೇಲೆ ನಲಿದವು. ಷಡಕ್ಷರ ಕವಿಯ 'ರಾಜಶೇಖರ ವಿಲಾಸ' ಶಬರಶಂಕರ ವಿಳಾಸಗಳು ಚಂಪೂ ಸಂಪ್ರದಾಯಕ್ಕೆ ಮರುಜೀವಣೆಯಿತ್ತವು. ಸರ್ವಜ್ಞನ ವಚನಗಳಂತೂ ನಾಡು ನುಡಿಗಳಾದವು. ನಿಜಗುಣ ಶಿವಯೋಗಿಯ ಷಟ್ ಶಾಸ್ತ್ರಗಳು ಕನ್ನಡಕ್ಕೆ ಶಾಸ್ತ್ರಸಾಹಿತ್ಯವನ್ನು ಒದಗಿಸಿದಂತೆ, ನಂತರದ





ಹಾಡುಗಬ್ಬಕಾರರ ಹಾಡುಗಳು ಸುಳಿದ ಶಾಸನಗಳಾಗಿ ಜನರ ನಾಲಗೆಯ ಮೇಲೆ ನಲಿದವು.

ಆಧುನಿಕ ಕಾಲದಲ್ಲಂತೂ ಇಂಗ್ಲೀಷ್ ಮತ್ತಿತರ ಭಾಷಾ ಸಂಪರ್ಕದಿಂದಾಗಿ ಕನ್ನಡ ಭಾಷಾ ಸಾಹಿತ್ಯಗಳಿಗೆ ಹೊಸ ಹೊಸ ಆಯಾಮಗಳು ದೊರೆತವು. ಸಣ್ಣಕಥೆ, ಕಾದಂಬರಿ, ಪ್ರಬಂಧ, ಭಾವಗೀತೆ ಮೊದಲಾದ ಹೊಸ ಪ್ರಕಾರಗಳ ಸಾಹಿತ್ಯ ಸುಗ್ಗಿ ಕಾಣಿಸಿಕೊಂಡು ಗುಣ-ಗಾತ್ರಗಳೆರಡರಲ್ಲೂ ಕನ್ನಡ ಸಾಹಿತ್ಯ ಶ್ರೀಮಂತವಾಯಿತು.

ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿಯನ್ನು ಆಧುನಿಕ ಸಾಹಿತ್ಯದ ಸಾಹಿತಿಗಳು – ಕುವೆಂಪು, ಬೇಂದ್ರೆ, ಮಾಸ್ತಿ, ಗೋಕಾಕ, ಕಾರಂತ, ಅನಂತಮೂರ್ತಿ ಹಾಗೂ ಗಿರೀಶ್‌ಕಾರ್ನಾಡ್ ಅವರು ಪಡೆದಿರುವುದು ನಮ್ಮ ನುಡಿ ಬಲ್ಮೆಯನ್ನು, ಸಾಹಿತ್ಯದ ಹಿರಿಮೆಯನ್ನು ಸಾರುತ್ತಿದೆಯಲ್ಲವೆ?

ಕನ್ನಡನಾಡು-ನುಡಿಯ ಬಗ್ಗೆ ಇಷ್ಟು ತಿಳಿದ ಮೇಲೆ ನಮಗೆ ಅವುಗಳ ಬಗ್ಗೆ ಗೌರವ, ಅಭಿಮಾನಗಳು ಮೂಡುವುದು ಸಹಜ.

ಇಂಥ ನಾಡನ್ನು ಮತ್ತಷ್ಟು ಸಂಪನ್ನಗೊಳಿಸಲು, ನುಡಿಯನ್ನು ಉಳಿಸಿ ಬೆಳೆಸಲು ನಾವು ಏನು ಮಾಡಬೇಕು ಎಂದು ಆಲೋಚಿಸಬೇಕು.

ನಮ್ಮ ಕವಿಗಳು, ಕಲಾವಿದರು, ಮುತ್ಸದ್ದಿಗಳು, ದಾರ್ಶನಿಕರು ನಮ್ಮ ನಾಡಿನ ಪ್ರತಿಷ್ಠೆಗೆ ಕಾರಣವಾಗಿದ್ದಾರೆ. ಅವರು ಬಿಟ್ಟುಹೋಗಿರುವ ಈ ಭವ್ಯ ಪರಂಪರೆಯನ್ನು ಮತ್ತಷ್ಟು ಉಜ್ವಲಗೊಳಿಸುವ ಹೊಣೆಗಾರಿಕೆ ನಮ್ಮದು. ನಾಡು ಸರ್ವತೋಮುಖವಾಗಿ ಬೆಳೆದು ಸ್ವಯಂಪೂರ್ಣತೆಯನ್ನು ಸಾಧಿಸಲು ನಾವೆಲ್ಲ ಶ್ರಮಿಸಬೇಕು. ಪ್ರಾಮಾಣಿಕ ದುಡಿಮೆ ಯೊಂದೇ ಇದಕ್ಕಿರುವ ಮಾರ್ಗ. ಇನ್ನು ನಮ್ಮ ನುಡಿ, ಎದೆ ಹಾಲಿನೊಡಗೂಡಿ ಬಂದ ನುಡಿ, ತನ್ನದೇ ಆದ ಹಿರಿಮೆಯನ್ನು ಹೊಂದಿದೆ ಪರಭಾಷಾ ವ್ಯಾಮೋಹದಿಂದ ಅದಕ್ಕೆ ಧಕ್ಕೆ ಭಾರದಂತೆ ಎಚ್ಚರವಹಿಸಬೇಕಿದೆ. ರಾಜ್ಯೋತ್ಸವದ ಶುಭ ಸಂದರ್ಭದಲ್ಲಿ ನಾವೆಲ್ಲೂ ನಾಡು-ನುಡಿಯ ಬಗೆಗಿನ ಪ್ರೀತಿ-ಅಭಿಮಾನಗಳನ್ನು ಪ್ರತಿಷ್ಠಾಪಿಸಿಕೊಳ್ಳಬೇಕು.

★

## ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘ

ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ.

### ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ

ಸಹೃದಯರೆ,

ಹಳೆಯ ವಿದ್ಯಾರ್ಥಿಗಳ ಸಂಘದ ೫೦ನೇ ಸರ್ವಸದಸ್ಯರ ಮಹಾಧಿವೇಶನವನ್ನು ದಿನಾಂಕ ೧೯-೧೨-೨೦೦೪ನೇ ಭಾನುವಾರ ಬೆಳಿಗ್ಗೆ ೧೦-೩೦ ಘಂಟೆಗೆ ಸರಿಯಾಗಿ "ಶ್ರೀ ಸಿದ್ಧಗಂಗಾ ಕ್ಷೇತ್ರದ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಆವರಣದಲ್ಲಿ" ನಮ್ಮ ಸಂಘದ ಸಂಸ್ಥಾಪಕರಾದ ಪರಮಪೂಜ್ಯರೂ, ತ್ರಿವಿಧ ದಾಸೋಹ ಮೂರ್ತಿಗಳೂ, ನಮ್ಮೆಲ್ಲರ ಆರಾಧ್ಯದೈವರೂ ಆದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯುವಂತೆ ವ್ಯವಸ್ಥೆ ಮಾಡಲಾಗಿದೆ.

ಸಂಘವು ಹಮ್ಮಿಕೊಂಡಿರುವ ಕೆಲವು ಅಮೂಲ್ಯ ಹಾಗೂ ಗುರುತರ ಕಾರ್ಯಗಳ ಬಗ್ಗೆ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳಬೇಕಾಗಿದೆ. ಅಂದಿನ ಸಭೆಗೆ ತಾವೆಲ್ಲರೂ ತಪ್ಪದೆ ಗೆಳೆಯರೊಂದಿಗೆ ಆಗಮಿಸಿ ತಮ್ಮ ಅಮೂಲ್ಯವಾದ ಸಲಹೆಗಳನ್ನು ನೀಡಿ ಅಧಿವೇಶನವನ್ನು ಯಶಸ್ವಿಗೊಳಿಸಿ ಶ್ರೀ ಶ್ರೀಗಳವರ ಕೃಪಾಶೀರ್ವಾದವನ್ನು ಪಡೆಯಬೇಕೆಂದು ಕೋರುತ್ತೇನೆ. ಶ್ರೀ ಕ್ಷೇತ್ರದಲ್ಲಿ ಅಧ್ಯಯನ ಮಾಡಿದ ಅನೇಕ ಮಿತ್ರರ ವಿಳಾಸಗಳು ಲಭ್ಯವಿರುವುದಿಲ್ಲ. ಮತ್ತೆ ಕೆಲವರ ವಿಳಾಸಗಳು ಬದಲಾವಣೆಯಾಗಿರುವ ಕಾರಣ ಮಹಾಧಿವೇಶನದ ಆಹ್ವಾನ ಪತ್ರಿಕೆಗಳು ತಲುಪದಿರುಬಹುದು. ಆದ್ದರಿಂದ ತಮಗೆ ತಿಳಿದಿರುವ ಹಳೆಯ ವಿದ್ಯಾರ್ಥಿ ಮಿತ್ರರನ್ನು ಹಾಗೂ ಶ್ರೀಕ್ಷೇತ್ರದ ಹಿತೈಷಿ ಬಂಧುಗಳನ್ನು ತಮ್ಮ ಜೊತೆಗೆ ಅಧಿಕ ಸಂಖ್ಯೆಯಲ್ಲಿ ಕರೆತರಬೇಕೆಂದು ಬಿನ್ನವಿಸಿಕೊಳ್ಳುತ್ತೇನೆ.

ವಿಶ್ವಾಸಪೂರ್ವಕ ನಮಸ್ಕಾರಗಳೊಂದಿಗೆ,

ತಮ್ಮ ವಿಶ್ವಾಸಿ,

ಡಾ. ಎಂ.ಎನ್. ಚನ್ನಬಸಪ್ಪ

ಪ್ರಧಾನ ಕಾರ್ಯದರ್ಶಿ

ಹಳೆಯ ವಿದ್ಯಾರ್ಥಿಗಳ ಸಂಘ

ಸ್ಥಳ : ಶ್ರೀ ಸಿದ್ಧಗಂಗಾ ಕ್ಷೇತ್ರ

ದಿನಾಂಕ : ೨೦-೧೧-೨೦೦೪



# ಷಡ್ ವೈರಿಗಳು : ಒಂದು ವಿವೇಚನೆ

– ಡಾ. ಬಸವರಾಜ ಸಬರದ
ಕನ್ನಡ ಪ್ರಾಧ್ಯಾಪಕರು,
ಗುಲಬರ್ಗ ವಿಶ್ವವಿದ್ಯಾಲಯ, ಗುಲಬರ್ಗ
ದೂರವಾಣಿ : 08472 - 245445, 2487740

## *ಕಾಮ-ಕ್ರೋಧ*

**ಕಾ**ಮ-ಕ್ರೋಧಗಳನ್ನು ಷಡ್‌ವೈರಿಗಳ ಸಾಲಿಗೆ ಸೇರಿಸಲಾಗಿದೆ. ಇವು ಮನುಷ್ಯನ ಒಳಗಿನಿಂದಲೆ ಹುಟ್ಟಿಕೊಳ್ಳುವ ವೈರಿಗಳಾಗಿವೆ. ಹೊರಗಿನ ವೈರಿಗಳ ಬಗೆಗೆ ಸದಾ ಕತ್ತಿ ಮಸಿಯುತ್ತಿರುವ ಮನುಷ್ಯ ಇಂತಹ ಒಳಗಿನ ವೈರಿಗಳನ್ನು ನಿವಾರಿಸಲು ಏನು ಕ್ರಮ ಕೈಕೊಂಡಿದ್ದಾನೆ ಎಂಬ ಪ್ರಶ್ನೆಗೆ ಬಹುಜನರಲ್ಲಿ ಉತ್ತರವೇ ಇರುವುದಿಲ್ಲ. ಶರಣರು-ಸಂತರು- ಸೂಫಿಗಳು ಈ ಒಳಗಿನ ವೈರಿಗಳನ್ನು ಕುರಿತೇ ಹೆಚ್ಚು ಹೇಳಿದ್ದಾರೆ. ಆದರೆ ರಾಜರು-ಸಚಿವರು-ಅಧಿಕಾರಿಗಳು ಹಾಗೂ ಆಳುವ ವರ್ಗ ಯಾವಾಗಲೂ ಹೊರಗಿನ ವೈರಿಗಳ ಬಗೆಗೆ ಮಾತ್ರ ಆಲೋಚಿಸುತ್ತಿರುತ್ತದೆ. ಸೂರ್ಯನನ್ನು ಮುಂದಿಟ್ಟುಕೊಂಡು ಸುತ್ತೆಲ್ಲ ಹುಡುಕಾಡಿದಂತೆ, ನಮ್ಮೊಳಗೇ ವೈರಿಗಳನ್ನು ಬಚ್ಚಿಟ್ಟುಕೊಂಡು, ನಾವು ಸದಾ ಹೊರಗಿನ ವೈರಿಗಳ ಬಗೆಗೆ ಮಾತನಾಡುತ್ತಿರುತ್ತೇವೆ. ಇಂತಹ ನೇತ್ಯಾತ್ಮಕವಾಗಿರುವ ಈ ಷಡ್‌ವೈರಿಗಳನ್ನೂ ಶರಣರು ಇತ್ಯಾತ್ಮಕಗೊಳಿಸಿದ್ದಾರೆ. ಇದು ಬಹು ಮಹತ್ವದ ಸಂಗತಿಯಾಗುತ್ತದೆ.

**ದೈ**ಹಿಕ-ಕಾಮನೆಗಳನ್ನು ತೊರೆದು ಅದನ್ನು ಅಂತಃಕರಣಗೊಳಿಸಿದರೆ ಅದೇ ಭಕ್ತಿಯಾಗುತ್ತದೆ. ಆಗ ಕಾಮದಲ್ಲಿದ್ದ ಸ್ವಾರ್ಥ ಕಳೆದು ಹೋಗಿ ನಿರ್ಮಲವಾದ ಪ್ರೇಮ ಹೊರಹೊಮ್ಮುತ್ತದೆ. ಅದೇ ಮುಂದೆ ಶರಣತ್ವದ ದಾರಿಯನ್ನು ತೋರಿಸುತ್ತದೆ. ಇಂದ್ರಿಯ ಸುಖ, ಅತಿಭೋಗದಾಸೆ ಕಾಮದ ಅತಿರೇಕಗಳಾದರೆ; ಇಂದ್ರಿಯಗಳ ಹತೋಟಿ, ನಿಷ್ಕಾಮ ಪ್ರೇಮ ಭಕ್ತಿಬೀಜ ಮೊಳಕೆಯೊಡೆಯಲು ಕಾರಣವಾಗುತ್ತವೆ. ಅಂತೆಯೇ ಶರಣರು- ಸಂತರು ಕಾಮದ ಪ್ರಲೋಭನೆಗಳನ್ನು ಕಳೆದು ಅದನ್ನು ಭಕ್ತಿಯನ್ನಾಗಿ ಪರಿವರ್ತಿಸಿದರು. ಕ್ರೋಧದ ಅಗ್ನಿಯನ್ನು ತಣ್ಣಗಾಗಿಸಲು ಶಾಂತಿ ಸಿಂಚನ ಮಾಡಿದರು.

*'ಲಿಂಗ ಪ್ರೇಮಿಯಾದವನಿಗೆ ಕಾಮವಿರಬಾರದು, ಶರಣ ವೇದ್ಯನೆನಿಸಿದವಂಗೆ ಕ್ರೋಧವಿರಬಾರ*'ದೆಂದು ಬಸವಣ್ಣನವರು ಹೇಳಿದ್ದಾರೆ. ಚೆನ್ನಬಸವಣ್ಣ ಈ ಷಡ್‌ವೈರಿಗಳನ್ನು ಹೆಗ್ಗಣಕ್ಕೆ ಹೋಲಿಸಿದ್ದಾರೆ. ಹೆಗ್ಗಣವನಿಕ್ಕಿ ನೆಲಗಟ್ಟ ಕಟ್ಟಿದಂತಾಗುತ್ತದೆಂದು ವಿವರಿಸಿದ್ದಾರೆ. ಕಾಮವು ಕಾಡುವುದನ್ನು, ಕ್ರೋಧವು ಕೊಲ್ಲುವುದನ್ನು, ಆವಿಷ-ತಾಮಸಂಗಳು ನಾಶಮಾಡುವುದನ್ನು ಸಿದ್ಧರಾಮ ತಮ್ಮ ವಚನದಲ್ಲಿ ವಿವರಿಸಿದ್ದಾರೆ. *'ಕಾಮ-ಕ್ರೋಧವುಳ್ಳವರಿಗೆ ಮಹಾಜ್ಞಾನಿಗಳ ಮಾತೇಕೊ?'* – ಎಂದು ಅಮುಗೆ ರಾಯಮ್ಮ ಪ್ರಶ್ನಿಸಿದರೆ, ಕಾಮವ ಕಳೆದು ಕ್ರೋಧವ ದಾಟಬೇಕೆಂದು ಅಂಬಿಗರ ಚೌಡಯ್ಯ ಹೇಳಿದ್ದಾರೆ. ಕಾಮದ ಸೀಮೆಯನ್ನು ಕಳೆಯದೆ, ಕೋಪದ ಕೂಪವನ್ನು ಹೂಳದೆ ಸೋಮೇಶ್ವರ ಲಿಂಗವನ್ನು ಒಲಿಸಲು ಸಾಧ್ಯವಿಲ್ಲವೆಂದು ಆದಯ್ಯ ವಿವರಿಸಿದ್ದಾರೆ. 'ಕಾಮವೆಂಬುದು ಕಂಗಳ ಮುಂದೆ ಸುಳದಾಡುತ್ತಿದೆ, ಕ್ರೋಧವೆಂಬುದು ಮನದ ಮುಂದೆ ಇಕ್ಕಿ ಹರಿದಾಡುತ್ತಿದೆ'ಯೆಂದು ಶಿವಲೆಂಕ ಮಂಚಣ್ಣ ವಿಶ್ಲೇಷಿಸಿದ್ದಾರೆ.

**ಅ**ತಿ ಕಾಮ-ಅತಿ ಕ್ರೋಧಗಳು ಮನುಷ್ಯನ ಸರ್ವನಾಶವನ್ನೇ ಮಾಡುತ್ತವೆಂಬುದಕ್ಕೆ ನಮಗೆ ಚರಿತ್ರೆಯ ಅನೇಕ ಪ್ರಸಂಗಗಳು ಸಾಕ್ಷಿಯಾಗಿವೆ. ಈ ಷಡ್‌ವೈರಿಗಳನ್ನು ತೊರೆಯಬೇಕೆಂದು ನಮ್ಮ ಸಂಸ್ಕೃತಿಯಲ್ಲಿ ಮೊದಲಿನಿಂದಲೂ ಹೇಳುತ್ತಲೇ ಬಂದಿದೆ. ಕಾಮಿಗಳ ಕಥೆ ಏನಾಯಿತು? ಕ್ರೋಧಿಗಳು ಹೇಗೆ ನಾಶವಾದರೆಂಬ ಸಂಗತಿಯನ್ನು ನಮ್ಮ ಸಾಹಿತ್ಯ ತಿಳಿಸುತ್ತಲೇ ಬಂದಿದೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದ ಇಂದಿನ ಸಂದರ್ಭದಲ್ಲಿ ನಮ್ಮ ಸಾಂಸ್ಕೃತಿಕ-ಸಂಕಥನಗಳು ಮರೆಯಾಗತೊಡಗಿವೆ. ಜಾಗತೀಕರಣದ ಈ ತುರ್ತಿನಲ್ಲಿ ಮನುಷ್ಯ ಹಿಂದೆಂದಿಗಿಂತಲೂ ಅತಿಕಾಮಿಯಾಗಿದ್ದಾನೆ. ಒಳಗೆಲ್ಲಾ ಕ್ರೋಧದ ಬಾಂಬ್ ತುಂಬಿಕೊಳ್ಳತೊಡಗಿದ್ದಾನೆ. ಶಾಂತಿ ಮಂತ್ರ ಪಠಿಸಿದ ಈ ನೆಲದಲ್ಲಿಯೇ ವಿದೇಶಿ ಕ್ರೂರಿಗಳು ಬಾಂಬ್ ಮಾರಾಟ ಮಾಡತೊಡಗಿದ್ದಾರೆ. ಭಯೋತ್ಪಾದನೆ ಭಾರತವನ್ನು ಸುತ್ತುವರಿದಿದೆ. ಶಾಂತಿಯ ನೆಲೆಬೀಡಾಗಿದ್ದ ಈ ದೇಶ ಹೀಗೇಕಾಯಿತು? ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ್ದ ನಾವು ಇಂದೇನಾಗಿದ್ದೇವೆ? ಬುದ್ಧ ಹುಟ್ಟಿದ ನಾಡಿನಲ್ಲಿ, ಬಸವ ಬೆಳೆಸಿದ ಬೀಡಿನಲ್ಲಿ ಇಂದು ಏನು ನಡೆಯತೊಡಗಿದೆ?





ಗಾಂಧೀಜಿಯ ಗುಜರಾತ್ ಇಂದೇಕೆ ಕೋಮು ದಳ್ಳುರಿಯಲ್ಲಿ ಹೊತ್ತಿ ಉರಿಯುತಿದೆ? ಈ ಎಲ್ಲ ಪ್ರಶ್ನೆಗಳ ನಡುವೆ ಅಲ್ಲಮಪ್ರಭುವಿನ ಒಂದು ವಚನ ನೆನಪಾಗುತ್ತದೆ. ಅದರ ಪ್ರತಿಮಾಲೋಕ ಹೀಗಿದೆ :

*''ಆಡುತಾಡುತ ಬಂದ ಕೋಡಗ*
*ಜಪವ ಮಾಡುವ ತಪಸಿಯ ನುಂಗಿತ್ತಲ್ಲಾ !*
*ಬೇಡ ಬೇಡೆಂದಿತ್ತು, ಮುಂದಣ ಕೇರಿಯ ಮೊಲನೊಂದು !*
*ಮುಂದಣ ಮೊಲನ ಹಿಂದಣ ಕೋಡಗವ*
*ಕಂಗಳಿ ನುಂಗಿತ್ತು ಗುಹೇಶ್ವರಾ!''*

**ಮೊ**ಲ ಮತ್ತು ಕೊಡಗವನ್ನು ನೂಗುವ ಕಂಬಳಿ ಯಾವುದು? ಇದನ್ನು ನಾವೆಲ್ಲರೂ ಕೂಡಿಯೇ ಚಿಂತಿಸಬೇಕಲ್ಲವೆ?

## *ಲೋಭ-ಮೋಹ*

**ಕೊ**ಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ – ಎಂದು ಹೇಳಿದ ಸರ್ವಜ್ಞನ ನುಡಿಯಲ್ಲಿ, ಮನುಷ್ಯ ಲೋಭಿಯಾಗಬಾರದೆಂಬ ತಿಳುವಳಿಕೆ ಇದೆ. ಮನುಷ್ಯನ ಈ ಲೋಭಿಗುಣವನ್ನು ಕಳೆಯಲೆಂದೇ ದಾನದಂತಹ ಮೌಲ್ಯ ಹುಟ್ಟಿಕೊಂಡಿತು. ಮುಂದೆ ಶರಣರ ಕಾಲಕ್ಕೆ ಈ ದಾನೊ ಮೌಲ್ಯ ಬೆಳೆದು ದಾಸೋಹ ಮೌಲ್ಯವಾಯಿತು. ಲೋಭ ಮತ್ತು ಮೋಹಗಳೂ ಕೂಡ ಷಡ್‌ವೈರಿಗಳಲ್ಲಿಯೇ ಸೇರಿಕೊಂಡಿವೆ. ಸಂಗ್ರಹ ಮಾಡುವ ಪ್ರವೃತ್ತಿಯನ್ನು ಶರಣರು ವಿರೋಧಿಸಿದರು. ಅವರಿಗೆ ವರ್ತಮಾನ ಮುಖ್ಯವಾಯಿತು. ಇಹ ಮಹತ್ವವೆನಿಸಿತು. ಆದರೆ ಅವರು ತಮ್ಮ ವರ್ತಮಾನವನ್ನು ಹೊಸದಾಗಿ ರೂಪಿಸಿಕೊಂಡರು, ಇಹದ ಮೂಲಕವೇ ಪರವನ್ನು ಕಂಡುಕೊಂಡರು.

**ಸಂ**ಪತ್ತು ಕೆಲವು ಕಡೆ ಸಂಗ್ರಹವಾಯಿತೆಂದರೆ ಅಲ್ಲಿ ಶ್ರೀಮಂತ -ಬಡವರೆಂಬ ವರ್ಗ ಸೃಷ್ಟಿಯಾಗುತ್ತದೆ. ಈ ಸಂಗ್ರಹಿಸಿಡುವ ಸಂಪತ್ತೇ ಮುಂದೆ ತನ್ನ ವೈರಿಯಾಗುತ್ತದೆಂದು ಶರಣರು ಸ್ಪಷ್ಟಪಡಿಸಿದರು. *''ಲೋಭ-ಮೋಹದ ಕರಸ್ಥಲದಲ್ಲಿ ಲಿಂಗಸ್ವಾಯತವ ಮಾಡಿದೆನು''* ಎಂದು ಹೇಳಿರುವ ಮಡಿವಾಳ ಮಾಚಿದೇವ, ಈ ಷಡ್ ವೈರಿಗಳನ್ನು ಗೆಲ್ಲಲು ಪರ್ಯಾಯ ಮಾರ್ಗವೊಂದನ್ನು ಸೂಚಿಸಿದ್ದಾರೆ.

**ಈ** ಲೋಭ-ಮೋಹಗಳಿಂದಲೇ ಸ್ವಾರ್ಥ ಬೆಳೆಯಲಾರಂಭಿಸುತ್ತದೆ. ತಂದೆ ಕೂಡಿಟ್ಟ ದುಡ್ಡಿಗಾಗಿ ಮುಂದೆ ಮಕ್ಕಳೇ ಬಡಿದಾಡಿ ಸಾಯುತ್ತಾರೆ. ಆಸ್ತಿ-ಸಂಪತ್ತು ಸಂಗ್ರಹವಾದಂತೆಲ್ಲ ಪೈಪೋಟಿ-ಸ್ವಾರ್ಥ-ಈರ್ಷೆ ಬೆಳೆಯತೊಡಗುತ್ತವೆ. ಮುಂದೇ ಅವೇ ವೈರಿಗಳಾಗಿ ಪರಿಣಮಿಸುತ್ತವೆ. ಆದ್ದರಿಂದ ಹೊರಗಿನ ವೈರಿಗಳ ಹುಟ್ಟಿಗೆ ಈ ಷಡ್‌ವೈರಿಗಳೆಂಬ ಒಳಗಿನ ವೈರಿಗಳು ಮೂಲ ಕಾರಣರಾಗಿದ್ದಾರೆ.

**ಲೋ**ಭ-ಮೋಹಗಳಿಗೆಲ್ಲ ಆಸೆ-ಅತಿಯಾಸೆಯೇ ಕಾರಣವಾಗಿವೆ. ಮನುಷ್ಯರಿಗೆ ಈ ವಿಷಯಂಗಳ ಮೋಹ ಎಷ್ಟು ತೀವ್ರವಾಗಿದೆಯೆಂಬುದನ್ನು ಬಸವಣ್ಣ ತಮ್ಮ ವಚನವೊಂದರಲ್ಲಿ ಮನಮುಟ್ಟುವಂತೆ ಹೇಳಿದ್ದಾರೆ.

*''ಹಾವನ ಬಾಯಿಯಲ್ಲಿರುವ ಕಪ್ಪೆ ಹಾರುವ ನೊಣಕ್ಕೆ ಆಸೆ ಮಾಡುವಂತೆ, ಶೂಲವನೇರುವ ಕಳ್ಳ ಹಾಲುತುಪ್ಪವ ಕುಡಿಯ ಬಯಸಿದಂತೆ''*– ಎಂಬಂತಹ ಪ್ರಾಣಿರೂಪಕಗಳ ಮೂಲಕ ಅವರು ಕಟ್ಟಿನಿಲ್ಲಿಸಿದ ಚಿತ್ರಗಳು ತೀವ್ರ ಪರಿಣಾಮಕಾರಿಯಾಗಿವೆ. ಇನ್ನೊಂದು ಕ್ಷಣದಲ್ಲಿ ತಾನು ಹಾವಿನ ಬಾಯಿಯಲ್ಲಿ ಆಹಾರವಾಗಿ ಕರಗಿ ಹೋಗುತ್ತೇನೆಂಬ ಅರಿವು ಕಪ್ಪೆಗಿಲ್ಲ, ಆದ್ದರಿಂದ ಅದು ಹಾರುವ ನೊಣವನ್ನು ಬಯಸುತ್ತದೆ. ಆದರೆ ಅರಿವುಳ್ಳ ಮನುಷ್ಯನೂ ಹಾಗೆಯೇ ಮಾಡಿದರೆ, ಪ್ರಾಣಿಗಳಿಗಿಂತ ಮನುಷ್ಯ ಹೇಗೆ ಶ್ರೇಷ್ಠನಾಗುತ್ತಾನೆ?

**ಇಂ**ದು ಮನುಷ್ಯ ಸರಕು ಸಂಸ್ಕೃತಿಯ ಭಾಗವಾಗಿದ್ದಾನೆ. ಸಿಕ್ಕದ್ದನ್ನೆಲ್ಲ ಗಳಿಸಿಡಬೇಕೆಂಬ ದಾಹ, ಸುಂದರವಾದದ್ದೆಲ್ಲ ತನ್ನದಾಗಬೇಕೆಂಬ ಮೋಹ ಜನಸಮುದಾಯದಲ್ಲಿ ದಿನೇ ದಿನೆ ತೀವ್ರವಾಗತೊಡಗಿದೆ. ಸೂಫಿಗಳು ಈ ಮೋಹವನ್ನೇ ಮಾಯೆಯೆಂದು ಕರೆದರು. *''ಮನದ ಮುಂದಣ ಆಸೆಯೇ ಮಾಯೆ''* ಯೆಂದು ಅಲ್ಲಮಪ್ರಭು ಹೇಳಿದರು. *''ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ? ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಅಯ್ಯಾ?''* ಎಂದು ಆಯ್ದಕ್ಕಿ ಲಕ್ಕಮ್ಮ ಪ್ರಶ್ನಿಸಿದರು. ಇಂದು ಮನಸ್ಸಿಗೆ ಪ್ರಾಮುಖ್ಯತೆ ನೀಡದೆ ದೇಹಕ್ಕೆ ಪ್ರಾಮುಖ್ಯತೆ ಕೊಡಲಾಗುತ್ತದೆ. ಗುಣಕ್ಕೆ ಮಹತ್ವ ನೀಡದೆ ಹಣಕ್ಕೆ ಬೆಲೆ ಕೊಡಲಾಗುತ್ತದೆ. ಎಲ್ಲವೂ ಇಲ್ಲಿ ವ್ಯಾಪಾರದ ದೃಷ್ಟಿಯಿಂದ ಕೂಡಿವೆ. ಈ ಸೌಂದರ್ಯ ಸ್ಪರ್ಧೆ ಮಹಿಳೆಯರ ಅರೆಬೆತ್ತಲೆಯ ಜಾಹೀರಾತು, ಯುವಕರು ನಿತ್ಯ ನೋಡುವ ಬ್ಲ್ಯೂಫಿಲ್ಮ್‌ಗಳು ನಮ್ಮ ಸಂಸ್ಕೃತಿಯ ದುರಂತಕ್ಕೆ ಕಾರಣವಾಗಲಿವೆ.

**ಹ**ನ್ನೆರಡನೇ ಶತಮಾನದಲ್ಲಿದ್ದ ಚಂದಿಮರಸನೆಂಬ ವಚನಕಾರನು, *''ಈ ದೇಹವೆಂಬುದು ಎಲುವು ತೊಗಲು ನರಮಾಂಸಗಳ ಮಡು, ಇದು ಹಲವು ರೋಗಂಗಳ ತವರ್ಮನೆ''* ಎಂದು ಹೇಳಿದ್ದಾರೆ. ಇದನ್ನೇ ದಾಸರು *''ಈ ದೇಹವು ಮೂಳೆಮಾಂಸದ ತಡಿಕೆಯೆಂದು''* ವಿವರಿಸಿದ್ದಾರೆ. ಹೀಗೆ

ದೊಡ್ಡವರೆಲ್ಲ ದೊಡ್ಡ-ದೊಡ್ಡ ಮಾತುಗಳನ್ನು ಹೇಳಿ ಹೋಗಿದ್ದಾರೆ. ದೊಡ್ಡವರ ಈ ಮಾತುಗಳು ಸಣ್ಣವರಾದ ನಮಗೆ ಏಕೆ ಕೇಳಿಸುತ್ತಿಲ್ಲ? ಇದನ್ನು ಗಂಭೀರವಾಗಿ ಆಲೋಚಿಸಬೇಕಾಗಿದೆ.

### *ಮದ-ಮತ್ಸರ*

**ಮ**ದ-ಮತ್ಸರಗಳು ಅರಿಷಡ್ ವರ್ಗಗಳಲ್ಲಿ ಕೊನೆಯ ಹಂತದಲ್ಲಿ ಕಾಣಿಸಿಕೊಳ್ಳುತ್ತವೆ. ಮದ ಅಥವಾ ಅಹಂಕಾರವನ್ನು ಅಳಿಸಿಹಾಕಬೇಕೆಂದು ನಮ್ಮಲ್ಲಿ ಅನೇಕ ಸಾಧು-ಸಂತರು ಶತ-ಶತಮಾನಗಳಿಂದ ಹೇಳುತ್ತಲೇ ಬಂದಿದ್ದಾರೆ. ಆದರೆ ಅವರ ಮಾತುಗಳನ್ನು ಯಾರೂ ಕೇಳಿಸಿದಂತೆ – ಕಾಣಿಸುವುದಿಲ್ಲ. ಅಹಂಕಾರಗಳಲ್ಲಿ ಎಂಟು ಪ್ರಕಾರಗಳಿವೆ. ಕುಲಮದ, ಛಲಮದ, **ಧವಮದ, ರೂಪಮದ, ಯೌವನಮದ, ವಿದ್ಯಾಮದ, ರಾಜಮದ, ತಪೋಮದ – ಇವುಗಳನ್ನೇ ಅಷ್ಟಯದಗಳೆಂದು** ಕರೆಯುತ್ತಾರೆ. ಈ ಅಷ್ಟ ಮದವಳಿಯಲು ಅಷ್ಟಾವರಣಗಳನ್ನು ಹೊಂದಬೇಕೆಂದು ಶರಣರು ಹೇಳಿದ್ದಾರೆ.

*'ಅರ್ಥವುಂಟೆಂದು ಅಹಂಕರಿಸಿ ಮಾಡುವನ ಭಕ್ತಿ ತೊತ್ತಿನ ಕೂಟ, ತೊರೆಯದ ಮೇಳದಂತೆಂದು'* ಜೇಡರ ದಾಸಿಮಯ್ಯ ವಿಡಂಬನೆ ಮಾಡಿದ್ದಾರೆ. ಆಸೆಯಾಮಿಷವಳಿಯದೆ, ಹುಸಿ ವಿಷಯಂಗಳನ್ನು ಕಳೆಯದೆ, ಏನನ್ನೂ ಸಾಧಿಸಲಾಗುವುದಿಲ್ಲವೆಂದು ಡೋಹರಕಕ್ಕಯ್ಯ ಹೇಳಿದರೆ, ಪರಧನ, ಪರಾನ್ನ, ಪರಸ್ತ್ರೀಯಾಸೆ ಬಿಡದವನನ್ನು ಶರಣನೆಂತೆಂಬೆ ಮರುಳೆ? – ಎಂದು ನಿವೃತ್ತಿ ಸಂಗಯ್ಯ ಪ್ರಶ್ನಿಸಿದ್ದಾರೆ. ಶಾಸ್ತ್ರಮದ-ಸಂಪದ ಮದಗಳ ಅಪಾಯವನ್ನು ಕುರಿತು ಹೆಂಡದಮಾರಯ್ಯ ಬಹುಮುಖ್ಯವಾದ ಚರ್ಚೆಯನ್ನು ಪ್ರಾರಂಭಿಸಿದ್ದಾರೆ. ಹೀಗೆ ಕಾಯದ ಮದವಳಿಯದ ಹೊರತು ಮಾಯಾವಿಕಾರ ಅಳಿಯದೆಂದು ಶರಣರು ವಿವರಿಸುತ್ತಲೇ ಬಂದಿದ್ದಾರೆ. ಶತಮಾನಗಳಿಂದ ಇದೇ ಮಾತನ್ನು ಪುನರುಚ್ಚರಿಸುತ್ತಲೇ ಬಂದಿದ್ದಾರೆ. ಜಾಗೃತಿ ಮೂಡಿಸುತ್ತಲೇ ಬಂದಿದ್ದಾರೆ. ಇಷ್ಟಾದರೂ ಈ ಷಡ್‌ವೈರಿಗಳ ಉಪಟಳ ಕಡಿಮೆಯಾಗಿದೆಯೆ? ಎಂದು ಪ್ರಶ್ನಿಸಿಕೊಂಡಾಗ ಉತ್ತರ ನಿರಾಶದಾಯಕವೇ ಆಗಿದೆ.

**ಈ** ಮದಗಳನ್ನು ವಿಚಾರವಂತರು ರೋಗವೆಂದು ಕರೆಯುತ್ತಾರೆ. ಇಂತಹ ರೋಗ ಈಗ ದೇಶ-ವಿದೇಶಗಳಲ್ಲೆಲ್ಲ ವ್ಯಾಪಿಸಿದೆ. ಮೊದಲ ಜಗತ್ತಿನ ದೇಶಗಳು ಇಂದು ಮೂರನೇ ಜಗತ್ತಿನ ಬಡದೇಶಗಳನ್ನು ಅಹಂಕಾರದಿಂದ ತುಳಿಯುತ್ತಲೇ ಬಂದಿವೆ.

**ಇಂ**ದು ಜಾಗತಿಕ ಮಟ್ಟದಲ್ಲಿ ಬಾಂಬ್ ಮದವೆಂಬ ಒಂಬತ್ತನೇ ವೈರಿ ಸೃಷ್ಟಿಯಾಗಿದೆ. ಜಾಗತೀಕರಣವು ಇಂತಹ ಬಾಂಬ್ ಸಂಸ್ಕೃತಿಯ ಏಜೆಂಟ್‌ನಂತೆ ವರ್ತಿಸುತ್ತದೆ. ಹೀಗಾಗಿ ಇದು ವಿವಿಧ ರೀತಿಯ ಹೊಸಮದಗಳು ಬೇರೆ ಬೇರೆ ರೂಪದಲ್ಲಿ ಮನುಷ್ಯನನ್ನು ನಾಶಪಡಿಸತೊಡಗಿವೆ. ಕುಲಮದವೆಂಬುದು ಇಂದು ಕೋಮುವಾದವಾಗಿ ಪರಿವರ್ತನೆ ಹೊಂದಿದೆ. ಈ ಕೋಮುದಳ್ಳುರಿ ದೇಶದೊಳಗಡೆ ತೀವ್ರಗೊಂಡು ಇಲ್ಲಿಯ ಅಮಾಯಕರನ್ನು ನಾಶಪಡಿಸಿದರೆ, ಹೊರಗಡೆ ಬಾಂಬ್ ದಳ್ಳುರಿ ತೀವ್ರಗೊಂಡು ಬಡದೇಶಗಳನ್ನು ವಿನಾಶದಂಚಿಗೆ ತಂದಿದೆ. ಇಂದಿನ ಸಂದರ್ಭದಲ್ಲಿ ತೀವ್ರಗೊಂಡಿರುವ ಈ ಯುದ್ಧೋತ್ಪಾದನೆ ಹಾಗೂ ಭಯೋತ್ಪಾದನೆಗಳನ್ನು ನೆನಪಿಸಿಕೊಂಡಾಗ ತೀವ್ರ ದುಃಖವೆನಿಸುತ್ತದೆ.

**ಮ**ತ್ಸರವಂತೂ ಇಂದು ಎಲ್ಲ ಕ್ಷೇತ್ರಗಳಲ್ಲಿಯೂ ಬೆಳೆದು ನಿಂತಿದೆ. ಮುಂದೆ ಹೋಗುವವರನ್ನು ಕಂಡು ಮತ್ಸರಪಟ್ಟುಕೊಂಡು ಕಾಲ್ಹಿಡಿದೆಳೆಯುವ ದಂಡೇ ಇಂದು ಸಿದ್ಧವಾಗಿ ನಿಂತಿದೆ. ಹಿಂದೆ ಸವತಿ ಮತ್ಸರವೆಂಬ ಮಾತು ಮಾತ್ರ ಪ್ರಚಲಿತದಲ್ಲಿತ್ತು. ಆದರೆ ಇಂದು ವೃತ್ತಿ ಮತ್ಸರ, ರೂಪ ಮತ್ಸರ, ಯೌವನ ಮತ್ಸರ, ವಿದ್ಯಾ ಮತ್ಸರ, ಹುದ್ದೆಯ ಮತ್ಸರ – ಹೀಗೆ ಇದರ ಹೊಸ ರೂಪಗಳು ಕಾಣಿಸಿಕೊಳ್ಳುತ್ತಲೇ ಇವೆ. ತನ್ನ ಒಂದು ಕಣ್ಣು ಹೋದರೂ ಚಿಂತೆಯಿಲ್ಲ, ಅವನ ಎರಡೂ ಕಣ್ಣು ಹೋಗಬೇಕೆಂಬ ಹಟ ಜನಸಮುದಾಯದಲ್ಲಿ ಸೇರಿಕೊಂಡಿದೆ.

**ತೆ**ರಣಿಯ ಹುಳು ತನ್ನ ಸ್ನೇಹದಿಂದ ಮನೆಯಮಾಡಿ, ತನ್ನ ನೂಲಿನಲಿ ತನ್ನನೇ ಸುತ್ತಿಕೊಂಡು ಸಾಯುವಂತೆ ಇಂದಿನ ಸಮಾಜ ವ್ಯವಸ್ಥೆಯ ಸ್ಥಿತಿಯಾಗಿದೆ. ಜನಸಮುದಾಯದಲ್ಲಿ ಅರಿವುಮೂಡಿಸುವುದರಿಂದ, ಧ್ಯಾನಸ್ಥ ನಿಲುವು ತಾಳುವುದರಿಂದ ಇದಕ್ಕೆ ಪರಿಹಾರವನ್ನು ಕಂಡುಕೊಳ್ಳಬೇಕಾಗಿದೆ. ಇದನ್ನೇ ಜೇಡರ ದಾಸಿಮಯ್ಯ ತನ್ನ ವಚನವೊಂದರಲ್ಲಿ ಹೀಗೆ ಹೇಳಿದ್ದಾರೆ.

*''ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ*
*ಹಿರಿದಪ್ಪ ರಾಜ್ಯವನಿತ್ತೊಡೆಯೂ ಒಲ್ಲೆ*
*ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆಯಿತ್ತಡೆ*
*ನಿಮ್ಮ ನಿತ್ತೆ ಕಾಣಾ ರಾಮನಾಥ''.*

**ಜೇ**ಡರದಾಸಿಮಯ್ಯನ ಈ ವಚನ ಮೇಲಿನ ಎಲ್ಲಾ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಬಲ್ಲದು. ಈ ಬಗ್ಗೆ ಪ್ರಜ್ಞಾವಂತರು ಚಿಂತನೆ ಮಾಡಿ ಜನರಲ್ಲಿ ಅರಿವು ಮೂಡುವಂತೆ ಮಾಡಬೇಕಾದ ಅಗತ್ಯ ಇಂದು ಹೆಚ್ಚಾಗಿದೆ.

★







# ಶರಣರ ದೃಷ್ಟಿಯಲ್ಲಿ 'ಗುರು' : ಒಂದು ವಿವೇಚನೆ

– ಎಚ್.ಎಸ್. ಸಿದ್ಧಗಂಗಪ್ಪ
'ಶಿವಕೃಪ', ನಂ. ೫೩/೧, ಮೂರನೇ ಅಡ್ಡರಸ್ತೆ,
ಕಾವೇರಿ ಬಡಾವಣೆ, ನಾಗರಭಾವಿ ರಸ್ತೆ,
ವಿಜಯನಗರ, ಬೆಂಗಳೂರು–೪೦.

**ಸ**ಮಾಜದಲ್ಲಿ ಗುರುವಿನ ಸ್ಥಾನ ಅತ್ಯುನ್ನತವಾದುದು. ಗುರುವನ್ನು ದೈವಕ್ಕೆ, ತ್ರಿಮೂರ್ತಿಗಳಿಗೆ ಹೋಲಿಸಿದ್ದಾರೆ. ಸಮಾಜ ಯಾರಿಗೂ ಕೊಡಲಾಗದಂತಹ ಉನ್ನತ ಸ್ಥಾನವನ್ನು, ಮಹತ್ವವನ್ನು ನೀಡಿ ಗೌರವಿಸಿದೆ. ಯುಗ-ಯುಗಗಳಿಂದಲೂ ಗುರುವು ಈ ಗೌರವ ಸ್ಥಾನದಲ್ಲಿದ್ದು ಜನರಿಗೆ ಮಾರ್ಗದರ್ಶನ ನೀಡುತ್ತಾ ಬಂದಿದ್ದಾನೆ. ಅಜ್ಞಾನದಿಂದ ಸುಜ್ಞಾನದೆಡೆಗೆ, ಕತ್ತಲೆಯಿಂದ ಬೆಳಕಿನೆಡೆಗೆ ದಾರಿ ತೋರಿಸುತ್ತಾ ಬಂದಿದ್ದಾನೆ. 'ಗುರು' ಪದವಿ ಹಾಗೆ ಬಂದುದಲ್ಲ; ಬರುವುದೂ ಇಲ್ಲ. ಗುರುವಾದವನು ತಾನು ಮೊದಲು ಆ ಸ್ಥಾನಕ್ಕೆ ಅಗತ್ಯವಾದ ಅರ್ಹತೆಯನ್ನು ಪಡೆದುಕೊಳ್ಳಬೇಕು. ಆ ಅರ್ಹತೆಯನ್ನು ಕಷ್ಟಪಟ್ಟು ಸಂಪಾದಿಸಬೇಕು. ಕಷ್ಟಪಟ್ಟು ಸಂಪಾದಿಸಿದ 'ಜ್ಞಾನವೆಂಬ' ಸ್ಪರ್ಶಮಣಿಯನ್ನು ತನ್ನ ಆಶ್ರಯ ಬೇಡಿ ಬಂದವರಿಗೆ ಸ್ಪರ್ಶಿಸಿ ಮಾರ್ಗದರ್ಶನ ನೀಡಿ ಅವರೊಳಗಿನ ಅರಿವಿನ ಜ್ಯೋತಿಯನ್ನು ಹಚ್ಚಿ ನಿರಂತರವಾಗಿ ಬೆಳಗುವಂತೆ ಮಾಡಬೇಕು. ರಾಕ್ಷಸತ್ವದ ಸ್ಥಳದಲ್ಲಿ ಮನುಷ್ಯತ್ವ ಮಾನವೀಯ ಮೌಲ್ಯಗಳಾದ ದಯೆ, ಧರ್ಮ, ನೀತಿ, ಪ್ರಾಮಾಣಿಕತೆ ಬೆಳೆಯುವಂತೆ ಮಾಡಬೇಕು. ಕರುಣೆ ಮೊದಲಾದ ಸದ್ಗುಣಗಳ ಬೀಜವನ್ನು ಬಿತ್ತಿ ಅವು ಬೆಳೆದು ಹೆಮ್ಮರವಾಗುವಂತೆ ಮಾಡುವ ಗುರುತರವಾದ ಜವಾಬ್ದಾರಿ ಗುರುವಿನ ಮೇಲಿದೆ.

'**ಗು**ರು'ವಿನ ಸ್ಥಾನ ಒಂದು ಧರ್ಮಕ್ಕೆ, ಒಂದು ಪಂಥಕ್ಕೆ ಸೀಮಿತವಾಗಿಲ್ಲ. ದೇವರು ಹೇಗೆ ವಿಶ್ವವ್ಯಾಪಿಯೋ ಹಾಗೆಯೇ ಗುರುವು ಕೂಡ. ಎಲ್ಲ ಧರ್ಮಗಳಲ್ಲಿಯೂ ಗುರುವಾದವನು ತನ್ನದೇ ಆದ ಸ್ಥಾನವನ್ನು ಹೊಂದಿದ್ದಾನೆ. ಆಯಾ ಧರ್ಮಗಳು ಗುರುವಿಗೆ ಪೂಜ್ಯ ಸ್ಥಾನವನ್ನು ನೀಡುತ್ತಾ ಬಂದಿವೆ. ತೈತ್ತಿರೀಯ ಉಪನಿಷತ್ತಿನಲ್ಲಿ, *''ಆಚಾರ್ಯಃ ಪೂರ್ವರೂಪಂ । ಅಂತೇವಾಸೀ ಉತ್ತರ ರೂಪಂ''* ಎಂದು ಹೇಳಿದೆ. ಆಚಾರ್ಯ ಪೂರ್ವರೂಪ, ಶಿಷ್ಯ ಉತ್ತರರೂಪ, ಇಬ್ಬರ ಮಧ್ಯೆ ಸಂಧಿ ಆತ್ಮವಿದ್ಯೆ. ಜ್ಞಾನ ಯಾರಿಂದ ಹರಿದು ಬರುತ್ತದೆಯೋ ಆತ ಆಚಾರ್ಯ. ಜ್ಞಾನವನ್ನು ಸ್ವೀಕರಿಸುವವ ಶಿಷ್ಯ. ಈ ಜ್ಞಾನವು ಆತ್ಮವಿದ್ಯೆ.

**ಗು**ರು ಶಿಷ್ಯರ ಸಂಬಂಧ ಗಾಢವಾಗಿರಬೇಕು. ಪವಿತ್ರವಾಗಿರಬೇಕು. ಶಿಷ್ಯ ವಿದ್ಯೆಯನ್ನು ಸ್ವೀಕರಿಸಬೇಕು. ಗುರು ವಿದ್ಯೆಯನ್ನು ಧಾರೆ ಎರೆಯಬೇಕು. ತಾಯಿ ಆನಂದದಿಂದ ಮಗುವಿಗೆ ಹಾಲು ಕುಡಿಸಿದಂತೆ, ಮಗು ಸಂತೋಷದಿಂದ ಹಾಲು ಕುಡಿದಂತೆ ಸುಖಿಸಬೇಕು. ಅಂತಹ ಭಾವನೆ ಗುರುಶಿಷ್ಯರಿಬ್ಬರಲ್ಲಿಯೂ ಅಪ್ರಯತ್ನಪೂರ್ವಕವಾಗಿ ಮೂಡಬೇಕು.

**ಗು**ರುವಾದವನಿಗೆ ಹೃದಯದಲ್ಲಿ ದ್ವೇಷ ಸುಳಿಯಬಾರದು. ಆಸೆ ಆಮಿಷಗಳಿಗೆ ಸ್ಥಾನವಿರಬಾರದು. ಅಂಥ ಸದ್ಗುಣವುಳ್ಳವನೇ ನಿಜವಾದ ಗುರು, ಆಚಾರ್ಯ. ಅಂಥ ಗುರುವಿನ ಸಾನ್ನಿಧ್ಯದಿಂದ ಶಿಷ್ಯ ಪುನೀತನಾಗುತ್ತಾನೆ. ಜ್ಞಾನದ ಗಣಿಯಾಗುತ್ತಾನೆ. ಗುರುಶಿಷ್ಯರ ಸಂಬಂಧ ಹಾಲಿಗೆ ಜೇನು ಬೆರತಂತೆ ಇರಬೇಕು. ಹಾಗಾದಾಗ ಮಾತ್ರ ಹಾಲು-ಜೇನಿಗೆ ಎರಡಕ್ಕೂ ಮಹತ್ವ ಬರುತ್ತದೆ.

**ಬ**ಸವಣ್ಣನವರು ತಮ್ಮ ವಚನದಲ್ಲಿ ಗುರು ಶಿಷ್ಯರ ಸಂಬಂಧವನ್ನು ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ.

*ಮಡಕೆಯ ಮಾಡುವಡೆ ಮಣ್ಣೇ ಮೊದಲು*
*ತೊಡಗೆಯ ಮಾಡುವಡೆ ಹೊನ್ನೇ ಮೊದಲು*
*ಶಿವಪಥವನರಿದಡೆ ಗುರುಪಥವೇ ಮೊದಲು*
*ಕೂಡಲಸಂಗಮದೇವನರಿವಡೆ*
*ಶರಣರ ಸಂಗವೆ ಮೊದಲು.*

ಮಣ್ಣಿಲ್ಲದೆ ಮಡಕೆ ಮಾಡಲು, ಚಿನ್ನವಿಲ್ಲದೆ ಹೇಗೆ ಆಭರಣ ಮಾಡಲು ಸಾಧ್ಯವಿಲ್ಲವೋ, ಹಾಗೆಯೇ ಗುರುವಿನ ಅನುಗ್ರಹ, ಮಾರ್ಗದರ್ಶನ ಇಲ್ಲದೆ ಇದ್ದರೆ ಭಗವಂತನ ದರ್ಶನವಾಗುವುದಿಲ್ಲ. ಗುರು ಶಿಷ್ಯನಿಗೆ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಲು ದಾರಿ ತೋರಿಸುವ ಪಥಿಕ, ಮಾರ್ಗದರ್ಶಕ.

**ಮ**ಗು ಈ ಜಗತ್ತಿಗೆ ಬಂದ ಕೂಡಲೇ ಮೊದಲ ಗುರುವಿನ ಸಾಮೀಪ್ಯದ ಸುಖವನ್ನು ಅನುಭವಿಸುತ್ತದೆ. ಮಗುವಿಗೆ ಜೀವ ಚೈತನ್ಯವನ್ನು ನೀಡುವ ತಾಯಿಯೇ ಮೊದಲ ಗುರು. ವೇದ ಪುರಾಣಗಳು, ನಮ್ಮ ಜನಪದ ಎಲ್ಲರೂ **'ತಾಯಿಯೇ ಮೊದಲ ಗುರು'** ಎಂದು ಹೇಳುವುದರ ಮೂಲಕ ತಾಯಿಗೆ ಉನ್ನತ ಸ್ಥಾನವನ್ನು ನೀಡಿ ಗೌರವಿಸಿದ್ದಾರೆ. ಈ ಕಾರಣದಿಂದಲೇ ಮಗುವಿಗೆ ಮನೆಯೆ

ಮೊದಲ ಪಾಠಶಾಲೆ ಎಂದು ಹೇಳುವುದರ ಮೂಲಕ ಮನೆಯನ್ನೇ ಗುರುವಿನ ಆವಾಸ್ಥಾನವನ್ನಾಗಿ ಮಾಡಿದ್ದಾರೆ. ಈ ಗುರುವಿನ ಆಶ್ರಯದಲ್ಲಿ ಬೆಳೆಯುವ ಮಗುವಿಗೆ ಎಲ್ಲವೂ ಉಚಿತ. ಇಲ್ಲಿ ತಾಯಿ ಮಾತನಾಡುವುದನ್ನು ಕಲಿಸುತ್ತಾಳೆ, ಸಮಾಜದಲ್ಲಿ ಹೇಗೆ ಬೆಳೆಯಬೇಕು, ಬೆರೆಯಬೇಕು ಎಂಬುದನ್ನು ಕಲಿಸುತ್ತಾಳೆ. ನಡೆ-ನುಡಿ, ಆಚಾರ-ವಿಚಾರ, ಸಂಪ್ರದಾಯ ಎಲ್ಲದರ ಬಗ್ಗೆಯೂ ಸೂಕ್ತ ತರಬೇತಿ ನೀಡುತ್ತಾಳೆ. ಮಗು ಇಲ್ಲಿ ಕಲಿಯಲು ಯಾವುದೇ ಕಟ್ಟುಪಾಡುಗಳಿಲ್ಲ. ತಿನ್ನುತ್ತಾ, ಆಡುತ್ತಾ, ಕುಣಿಯುತ್ತಾ ಕಲಿಯುತ್ತದೆ. ಪ್ರತಿಯೊಂದು ಕ್ರಿಯೆಗೂ ತಾಯಿ ಮಾರ್ಗದರ್ಶನ ನೀಡುತ್ತಾಳೆ. ತಾಳ್ಮೆಯಿಂದ, ಪ್ರೀತಿಯಿಂದ ಎಲ್ಲವನ್ನು ಕಲಿಸುತ್ತಾಳೆ. ಮಗುವಿನ ಭವಿಷ್ಯ ಜೀವನಕ್ಕೆ ಭದ್ರ ಬುನಾದಿಯನ್ನು ಹಾಕುತ್ತಾಳೆ.

**ಶಿ**ಷ್ಯ ಜ್ಞಾನವನ್ನು ಸಂಪಾದಿಸಲು ಗುರುವನ್ನು ಹುಡುಕಿಕೊಂಡು ಹೋಗಬೇಕು. ಗುರುವಿನ ಸಾನ್ನಿಧ್ಯದಲ್ಲಿ ಶಿಕ್ಷಣವನ್ನು ಪಡೆಯಬೇಕು. ವೇದ ಪುರಾಣಗಳನ್ನು ಅವಲೋಕಿಸುವಾಗ ಅನೇಕ ಉದಾಹರಣೆಗಳು ನಮಗೆ ಸಿಗುತ್ತವೆ. ರಾಜನಾದವನು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಆಶ್ರಮಕ್ಕೆ ಕಳುಹಿಸುತ್ತಿದ್ದ. ಅವನು ಮನಸ್ಸು ಮಾಡಿದ್ದರೆ ನೂರಾರು ಜನ ಗುರುಗಳು ಅರಮನೆಗೆ ಬಂದು ಕಲಿಸುವವರಿದ್ದರು. ಆದರೆ ರಾಜರು ಹಾಗೆ ಮಾಡುತ್ತಿರಲಿಲ್ಲ. ತನ್ನ ಮಕ್ಕಳು ಮುಂದೆ ಸತ್ಪ್ರಜೆಯಾಗಿ ಜನಾನುರಾಗಿ ರಾಜನಾಗಬೇಕಾದರೆ ಎಲ್ಲರೊಂದಿಗೆ ಬೆಳೆಯಬೇಕು; ಬೆರೆಯಬೇಕು. ಕಷ್ಟಸುಖಗಳನ್ನು ಅನುಭವಿಸಬೇಕು ಎಂಬ ಉದ್ದೇಶದಿಂದ ಆಶ್ರಮದಲ್ಲಿ ಬಿಡುತ್ತಿದ್ದರು. ಇಲ್ಲಿ ರಾಜಕುಮಾರ 'ನಾನು ರಾಜಕುಮಾರ' ಎಂಬ ಹಮ್ಮು ತೊರೆದು ಒಬ್ಬ ಸಾಮಾನ್ಯ ಪ್ರಜೆಯಂತೆ ಆಶ್ರಮವಾಸಿಗಳೊಂದಿಗೆ ಬೆಳೆಯಬೇಕಾಗಿತ್ತು. ಇಲ್ಲಿ ಮೇಲು-ಕೀಳು ಎಂಬ ಭಾವನೆಯಿರಲಿಲ್ಲ. ಗುರುವಿನ ದೃಷ್ಟಿಯಲ್ಲಿ ಎಲ್ಲರೂ ಒಂದೇ ಎಂಬ ಭಾವನೆ ಮೂಡುತ್ತಿತ್ತು. ಗುರುಗಳು ತಮ್ಮ ಎಲ್ಲ ಶಿಷ್ಯಂದಿರಲ್ಲಿಯೂ ಸಮಾನ ಪ್ರೀತಿಯನ್ನು ತೋರಿಸುತ್ತಿದ್ದರು. ಇಂತಹ ಗುರುಗಳೂ ತಪ್ಪು ಮಾಡುತ್ತಾರೆ ಎಂಬುದಕ್ಕೆ ಮಹಾಭಾರತದಲ್ಲಿ ಬರುವ ದ್ರೋಣಾಚಾರ್ಯ ಉದಾಹರಣೆಯಾಗಿ ನಿಲ್ಲುತ್ತಾನೆ. ಅರ್ಜುನನ ಮೇಲಿನ ಅತಿಯಾದ ಪ್ರೀತಿ ಮಮತೆಯಿಂದ 'ಏಕಲವ್ಯ'ನ ಹೆಬ್ಬೆರಳನ್ನು ಗುರು ಕಾಣಿಕೆಯಾಗಿ ಪಡೆಯುವ ಕೀಳು ಮಟ್ಟಕ್ಕೆ ಹೋಗುತ್ತಾನೆ. ಹಿಂದೆ ಮುಂದೆ ಯೋಚಿಸದೆ, ಯಾವುದೋ ಸಂದರ್ಭದಲ್ಲಿ ಅರ್ಜುನನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲು 'ಗುರು'ವಿನ ಸ್ಥಾನಕ್ಕೆ ದ್ರೋಹ ಬಗೆಯುತ್ತಾನೆ. ಕೊನೆಯವರೆಗೂ ತಾನು ಮಾಡಿದ ತಪ್ಪಿಗಾಗಿ ಮನಸ್ಸಿನಲ್ಲಿಯೇ ಪಶ್ಚಾತ್ತಾಪ ಪಡುತ್ತಾನೆ. 'ಪಾಪಪ್ರಜ್ಞೆ' ಅವನನ್ನು ಕೊನೆಯವರೆಗೂ ಕಾಡುತ್ತದೆ. ಹಿಂದೆ ಆಶ್ರಮಗಳಲ್ಲಿ ಕೇವಲ ಅಕ್ಷರ ವಿದ್ಯೆಯನಷ್ಟೇ ಕಲಿಸುತ್ತಿರಲಿಲ್ಲ. ಬದುಕಿನ ಪಾಠವನ್ನೂ ಕಲಿಸುತ್ತಿದ್ದರು.

**ಶಿ**ಷ್ಯನಾದವನಿಗೂ ತಾನು ಕಲಿಯಬೇಕು, ಜ್ಞಾನವನ್ನು ಸಂಪಾದಿಸಬೇಕು ಎಂಬ ಉತ್ಕಟವಾದ ಬಯಕೆ ಹಾಗೂ ಮನಸ್ಸಿರಬೇಕು. ಅಂತಹ ಬಯಕೆ, ಮನಸ್ಸಿದ್ದಾಗ ಮಾತ್ರ ಆತ ನಿಜವಾದ ಶಿಷ್ಯನಾಗಲು ಅರ್ಹತೆ ಪಡೆಯುತ್ತಾನೆ. ಇಲ್ಲಿ ಕಲಿಯುವವ ಮತ್ತು ಕಲಿಸುವವ ಇಬ್ಬರೂ ಮುಖ್ಯರಾಗುತ್ತಾರೆ. ಒಂದು ಕೈಯಿಂದ ಹೇಗೆ ಚಪ್ಪಾಳೆ ಹೊಡೆಯಲು ಸಾಧ್ಯವಾಗುವುದಿಲ್ಲವೋ ಹಾಗೆ ಸರಿಯಾಗಿ ಕಲಿಯುವವರಿಲ್ಲದ ಮೇಲೆ ಕಲಿಸುವವರು ಇದ್ದರೂ ಪ್ರಯೋಜನವಿಲ್ಲ. ಹಾಗೆಯೇ ಕಲಿಯುವವರಿದ್ದು ಕಲಿಸುವವರಿಲ್ಲದಿದ್ದರೂ ಬಯಕೆ ಈಡೇರುವುದಿಲ್ಲ.

''**ಸ**ತ್ಯಕಾಮ ಬಾಲಕ, ಜ್ಞಾನ ಪಿಪಾಸು, ಗುರುವಿನ ಬಳಿ ಸಾಗಿದ. ನೇರವಾಗಿ ವಿದ್ಯೆಯೀಯಲು ಅವರು ಇಚ್ಛೆಸಲಿಲ್ಲ. ಕೆಲವು ಗೋವುಗಳನ್ನು ಕೊಟ್ಟು ಅರಣ್ಯದಲ್ಲಿ ಹೋಗಿ, ಈ ಗೋವುಗಳು ನೂರಾಗುವವರೆಗೂ ಪಾಲಿಸು. ಬಳಿಕ ಆತ್ಮಜ್ಞಾನೋಪದೇಶ ಮಾಡುವುದಾಗಿ ತಿಳಿಸಿದರು. ಗುರುಗಳ ಆದೇಶದಂತೆ ಬಾಲಕ ಹೋದ. ಗೋವುಗಳೊಂದಿಗೆ ನಿಶ್ಚಿಂತ, ನಿರಾಮಯ, ನಿರ್ಮಲಾಂತಃಕರಣ. ಬಿಸಿಲಲ್ಲಿ ಹಾಯಾಗಿ ಮೈ ಕಾಯಿಸಿದ. ಸೂರ್ಯೋದಯದ ಸೊಬಗು ಸವಿದ. ತಂಗಾಳಿಯಲಿ ನಲಿದ. ಮೈನವಿರಾಗಿ, ಬೆಳದಿಂಗಳಲ್ಲಿ ಹೃದಯ ಹರವಿ ಹಾಡಿದ. ರಾತ್ರಿಯ ಚುಕ್ಕಿ ಎಣಿಸಿದ. ಹೂವನದ ಪರಿಮಳ ಸೇವಿಸಿದ. ಹರಿವ ನದಿಯ ತಿಳಿ ನೀರ ಜಲದಲ್ಲಿ ಮಿಂದ; ಹಕ್ಕಿ ಪಕ್ಷಿಗಳೊಂದಿಗೆ ಹಣ್ಣು ಮೆದ್ದ. ಒಂದು ದಿನ ನದಿಯ ದಡದಲ್ಲಿ ಕುಳಿತಿದ್ದಾನೆ. ಅವನು ಕಾಡಿಗೆ ಬಂದು ಹತ್ತು ವರ್ಷಗಳು ಕಳೆದಿವೆ. ಮರುದಿನ ಗುರುವಿನೆಡೆಗೆ ಸಾಗಬೇಕು. ಬೆಳದಿಂಗಳಲ್ಲಿ ನದಿಯ ನೋಟ ಅವನನ್ನು ಹುಚ್ಚಾಗಿಸಿತ್ತು. ತೆರೆ ನೋಡುವಲ್ಲಿ ಮಗ್ನನಾಗಿಬಿಟ್ಟ. ಬಾಹ್ಯಜ್ಞಾನವಿಲ್ಲ. ಆ ಸಮಾಧಿ ಅವಸ್ಥೆಯಲ್ಲಿ ನದಿದೇವತೆ ನುಡಿದ 'ಸತ್ಯ ಕಾಮ, ನನ್ನತ್ತ ನೋಡು. ನಾನು ಅಸ್ಥಿರ. ಸದಾ ಹರಿಯುತ್ತಿದ್ದೇನೆ. ಒಂದು ಕ್ಷಣವು ಬಿಡುವಿಲ್ಲ. ನನ್ನಂತೆ ಎಲ್ಲ ಎಲ್ಲವೂ ಪ್ರವಾಹಿ, ಯಾವುದೂ ಸ್ಥಿರವಲ್ಲ; ಇದು ವಿಶ್ವಸತ್ಯ. ಸ್ಥಿರವಾದುದೇ ನನ್ನಾತ್ಮ, ನಿನ್ನಾತ್ಮ. ಇಂದು ನಿನಗೆ ಈ ಸ್ಥಿರ ಸತ್ಯದರ್ಶನ. ಸತ್ಯಕಾಮ ದಾರ್ಶನಿಕನಾದ. ದನಕಾಯುವ ಪುಟ್ಟ ಕೆಲಸ ಅವನನ್ನು ಋಷಿಯನ್ನಾಗಿಸಿತ್ತು. ಕಣ್ಣುಳ್ಳವನಿಗೆ ಮಗ್ನ ಮನಸ್ಸಿಗೆ ಸಾಮಾನ್ಯ ಕಾರ್ಯದಲ್ಲೂ ಸಾಕ್ಷಾತ್ಕಾರವಾಗುತ್ತದೆ.[೧]

**ಶಿ**ಷ್ಯನಾದವನಿಗೆ ಸತ್ಯಕಾಮನಂತಹ ಮನಸ್ಥಿತಿ ಬೇಕು. ಏನೇ ಕಷ್ಟ ಬಂದರೂ ಕಲಿಯಬೇಕೆಂಬ ಛಲ ಅವನಲ್ಲಿ ಮೂಡಿದಾಗ

೧. ಶ್ರೀ ಸಿದ್ದೇಶ್ವರ ಸ್ವಾಮಿಗಳು, ಭಗವ್ಚಚಿಂತನ, ಪುಟ ೪೨-೪೩.





ಮಾತ್ರ ಒಬ್ಬ ಒಳ್ಳೆಯ ಶಿಷ್ಯನಾಗಲು ಸಾಧ್ಯ. ಶಿಷ್ಯನಿಗೆ ಬಾಹ್ಯ ಕಣ್ಣಿಗಿಂತ ಅಂತರಂಗದ ಕಣ್ಣು ತೆರೆಯುವಂತೆ ಮಾಡಬೇಕು. ಒಳಗಣ್ಣು ತೆರೆಯಲು ಹತ್ತಾರು ವರ್ಷಗಳ ಸಾಧನೆ ಮಾಡಬೇಕು. ಅಂಥ ಶಿಷ್ಯನಿಂದ ಗುರುವಿಗೂ ಕೀರ್ತಿ ಬರುತ್ತದೆ.

**ಹಿಂ**ದಿನ ಕಾಲದಲ್ಲಿ ಒಬ್ಬ ಸಂತ ಇದ್ದ. ಅವನ ಹತ್ತಿರ ಒಬ್ಬ ಕುರುಡ ಬಂದ. 'ಸಂತರೆ ನನಗೊಂದು ಲ್ಯಾಂಟ್ರಿನ್ ಕೊಡಿ' ಎಂದು ಕೇಳಿದ. ಸಂತರು ಏಕೆ? ಎಂದು ಕೇಳಿದರು. ಅದಕ್ಕೆ ಆ ಕುರುಡ ''ಜನ ನನ್ನನ್ನು ಸರಿಯಾಗಿ ನೋಡಲಿ ಇಲ್ಲವಾದರೆ ನನ್ನ ಮೇಲೆ ಬೀಳುವ ಸಂಭವ''ವಿದೆ ಎಂದು ಹೇಳಿದ. ಆಗ ಸಂತ ಮರುಮಾತನಾಡದೆ 'ಲ್ಯಾಂಟ್ರಿನ್' ಕೊಟ್ಟ. ಕುರುಡನಿಗೆ ಬಹಳ ಸಂತೋಷವಾಯಿತು. ಆತ ಅದನ್ನು ಹಿಡಿದುಕೊಂಡು ಹೊರಟ. ನಾಲ್ಕು ಹೆಜ್ಜೆ ಹೊರಟಿರಲಿಲ್ಲ; ಒಬ್ಬ ಬಂದು ಮೈಮೇಲೆ ಬಿದ್ದ. ಆಗ ಕುರುಡ ಹೇಳಿದ 'ಕಾಣಿಸೋದಿಲ್ಲವೆ! ನಿನ್ನಂಥವರಿಗಾಗಿಯೇ ಈ ಲ್ಯಾಂಟ್ರಿನ್ ಹಿಡಿದು ಹೊರಟ್ಟಿದ್ದು; ಆದರೂ ಕಾಣಲಿಲ್ಲ?' ಎಂದು ನುಡಿದ.

**ಆ**ಗ ಆ ದಾರಿಹೋಕ ''ನಿನ್ನ ಲಾಂದ್ರ ಚೆನ್ನಾಗಿದೆ. ಆದರೇನು ಅದರೊಳಗೆ ದೀಪವಿಲ್ಲವಲ್ಲ'' ಎಂದು ಹೇಳಿದ. ಅವನ ಮಾತನ್ನು ಕೇಳಿ ಕುರುಡನಿಗೆ ಆಶ್ಚರ್ಯವಾಯಿತು. ''ಓ ಹೀಗೋ; ನಾನು ದೀಪ ಹಚ್ಚಿಕೊಳ್ಳುವುದನ್ನು ಮರೆತೆ'' ಎಂದು ಹೇಳಿ ಮತ್ತೆ ಹೊತ್ತಿಸಿಕೊಂಡು ಹೊರಟ. ನಾಲ್ಕು ಹೆಜ್ಜೆ ಹೋಗಿರಬೇಕು, ಮತ್ತೆ ಒಬ್ಬ ಮೈಮೇಲೆ ಬಂದು ಬಿದ್ದ. ಅವನಿಗೆ ಆಶ್ಚರ್ಯ ಆಯಿತು. 'ದೀಪ ಆರಿದೆಯೋ ಅಥವಾ ನಿನಗೆ ಕಾಣಲಿಲ್ಲವೋ' ಎಂದು ಕೇಳಿದ. ಅದಕ್ಕೆ ಅವನು ಹೇಳಿದ ''ಏನು ಮಾಡುವುದು ಹೇಳು; ಕಣ್ಣೇನೋ ಇದೆ. ನಿನ್ನ ಲಾಂದ್ರವೂ ಉರಿಯುತ್ತಿದೆ. ಆದರೆ ಆ ಕ್ಷಣ ಕಣ್ಣು ಮುಚ್ಚಿದ್ದೆ. ಇದ್ದವರು ಕಣ್ಣು ಮುಚ್ಚಿದ್ದಾರೆ, ಯಾರು ಕಣ್ಣು ತೆರೆದಿದ್ದಾರೆ ಅವರಿಗೆ ದೀಪ ಇಲ್ಲ. ಇವನಿಗೆ ದೀಪ ಇದೆ ಕಣ್ಣಿಲ್ಲ. ಏನು ವಿಚಿತ್ರ ಜೀವನ; ದೀಪ ಉರಿಯಬೇಕು, ಕಣ್ಣು ತೆರೆದಿರಬೇಕು. ಆಗ ಯಾರೂ ಮೈಮೇಲೆ ಬಂದು ಬೀಳುವುದಿಲ್ಲ. ಸುರಕ್ಷಿತತೆ ಇರುತ್ತದೆ.

**ಅ**ದು ನಮಗೆ ಕಾಣದಿದ್ದರೂ ಚಿಂತೆ ಇಲ್ಲ. ನಮ್ಮ ಕೈಯೊಳಗೆ ಈ ಚಿಂತನ ದೀಪ ಇರಬೇಕು. ಅಂದರೆ, ಕನಿಷ್ಠ ಕಣ್ಣು ತೆರೆದವರು ನಮ್ಮ ಮೈಮೇಲೆ ಬಂದು ಬೀಳುವುದಿಲ್ಲ. ಗುರುವಾದವನು ಜ್ಞಾನಲಾಂದ್ರ ಕೊಡುತ್ತಾನೆ. ಅದರಲ್ಲಿ ಅನುಭವದ ದೀಪವನ್ನು ಹೊತ್ತಿಸಿಕೊಡುತ್ತಾನೆ.

**ಕೆ**ಲವರು ಅವಸರದಲ್ಲಿ ಹಿಂದೆ ಮುಂದೆ ಯೋಚಿಸದೆ ಗುರು ನೀಡಿದ ಜ್ಞಾನಲಾಂದ್ರ (ಜ್ಞಾನಗ್ರಂಥ) ತೆಗೆದುಕೊಂಡು ಹೊರಟೇಬಿಡುತ್ತಾರೆ. ಜೀವನದಲ್ಲಿ ಪತಿತರಾಗುತ್ತಾರೆ. ಈ ಕುರುಡನಿಗೆ ವೇಳೆ ಇರಲಿಲ್ಲ. ದೀಪ ಹಚ್ಚಿಕೊಳ್ಳುವಷ್ಟು ವ್ಯವಧಾನ ಇರಲಿಲ್ಲ. ಹೀಗೆ ಹೊರಟಿದ್ದ. ಎಷ್ಟೋ ಸಲ ಶಾಸ್ತ್ರ ಕಲಿಯುವ ಅವಸರದಲ್ಲಿ ಜ್ಞಾನದೀಪ ಹತ್ತಿದೆಯೋ ಇಲ್ಲವೋ ಎಂದು ನೋಡುವುದೇ ಇಲ್ಲ. ಶಾಸ್ತ್ರ ವಚನಗಳನ್ನು ನಿಧಾನವಾಗಿ ಚಿಂತಿಸಬೇಕು. ಅದರಿಂದ ಕಾಲಾಂತರದಲ್ಲಿ ಬೆಳಕು ಮೂಡುತ್ತದೆ.[೨]

**ಇ**ಲ್ಲಿ ಲಾಂದ್ರವನ್ನು ಶಿಷ್ಯನಿಗೂ, ಬೆಳಕನ್ನು ಗುರುವಿಗೂ ಹೋಲಿಸಬಹುದು. ಲಾಂದ್ರಕ್ಕೆ ಕಾಲಕಾಲಕ್ಕೆ ಎಣ್ಣೆ, ಬತ್ತಿ ಹಾಕದಿದ್ದರೆ ಅದು ಉರಿಯುವುದಿಲ್ಲ. ನಿರಂತರವಾಗಿ ನಾವು ನಿರ್ದಿಷ್ಟ ಸ್ಥಳ ತಲುಪುವವರೆಗೂ ದೀಪ ಉರಿಯುವಂತೆ ನೋಡಿಕೊಳ್ಳಬೇಕು. ಅದಕ್ಕೆ ಗುರುವಾದವನು ಎಣ್ಣೆ ಖಾಲಿಯಾದಂತೆ ಜಾಗೃತಿ ವಹಿಸಬೇಕು. ಜೊತೆಗೆ ಬತ್ತಿ ಚೆನ್ನಾಗಿ ಉರಿಯುವಂತೆ ನೋಡಿಕೊಳ್ಳಬೇಕು. ಗುರುವು ಶಿಷ್ಯನಿಗೆ ಸೂಕ್ತ ಮಾರ್ಗದರ್ಶನ ನೀಡುವ ದೀಪವಾಗಿ, ಬೆಳಕಾಗಿ ಕಾಣಿಸುತ್ತಾನೆ. ಆ ದೀಪದ ಬೆಳಕಿನಲ್ಲಿ ಶಿಷ್ಯನು ಜೀವನವನ್ನು ರೂಪಿಸಿಕೊಳ್ಳಬೇಕು. ಆಗ ಅವನ ಭವಿಷ್ಯ ಉಜ್ವಲವಾಗುತ್ತದೆ.

'**ಗು**ರು'ವನ್ನು ಕುರಿತು ಅನುಭಾವಿ ಕವಿ ಮುಪ್ಪಿನ ಷಡಕ್ಷರಿಯವರು ತುಂಬಾ ಅರ್ಥಪೂರ್ಣವಾಗಿ ಅನುಭಾವ ಗೀತೆಯ ಮೂಲಕ ಪರಿಚಯ ಮಾಡಿಕೊಟ್ಟಿದ್ದಾರೆ. ಅವರು ಲಿಂಗದಲ್ಲಿ ಗುರುವನ್ನು, ಗುರುವಿನಲ್ಲಿ ಲಿಂಗವನ್ನು ಶಿವನನ್ನು ಕಂಡಿದ್ದಾರೆ.

*ಅವರವರ ದರುಶನಕೆ*
*ಅವರವರ ವೇಷದಲಿ*
*ಅವರವರಿಗೆಲ್ಲ ಗುರು ನೀನೊಬ್ಬನೆ*
*ಅವರವರ ಭಾವಕ್ಕೆ*
*ಅವರವರ ಪೂಜೆಗೆ*
*ಅವರವರಿಗೆಲ್ಲ ಶಿವ ನೀನೊಬ್ಬನೆ*

*ಹೋರಾಟವಿಕ್ಕಿಸಲು*
*ಬೇರಾದೆಯಲ್ಲದೆ*
*ಬೇರುಂಟೆ ಜಗದೊಳಗೆ ಎಲೆ ದೇವನೆ*
*ಅದು ಅರಿಯದು ನೀನು*
*ಬೇರಾವ ಪರಿಗಳನ್ನು*
*ಮಾರಾರಿ ಶಿವ ಷಡಕ್ಷರಿ ಲಿಂಗವೆ*

ಸರ್ವಧರ್ಮಕ್ಕೆ ಸಾಂಕೇತಿಕವಾಗಿ ಹೊರಹೊಮ್ಮಿರುವ ಈ ಅನುಭಾವ ಗೀತೆಯಲ್ಲಿ ಮಿಂದು ಅರ್ಥಮಾಡಿಕೊಳ್ಳುತ್ತಾ

೨. ಶ್ರೀ ಸಿದ್ದೇಶ್ವರ ಸ್ವಾಮಿಗಳು, ಭಗವ್ಚಚಿಂತನ, ಪುಟ ೯೦-೯೧.

ಹೋದಂತೆ ನಮಗೆ ಸಾಗರದ ಒಳನೋಟದ ದಿವ್ಯದರ್ಶನ ವಾಗುತ್ತದೆ. ಅವರವರ ಭಾವಕ್ಕೆ ಅನುಗುಣವಾಗಿ, ಅವರವರ ತಿಳಿವಳಿಕೆಗನುಗುಣವಾಗಿ ಅರ್ಥಮಾಡಿಕೊಳ್ಳಬಹುದಾಗಿದೆ. ವ್ಯಕ್ತಿ ವಿಶಾಲ ದೃಷ್ಟಿಯನ್ನು, ವಿಶಾಲ ಭಾವನೆಯನ್ನು ಹೊಂದಿದಾಗ ಮಾತ್ರ ಸಮಾಜದಲ್ಲಿ ಶಾಂತಿ, ನೆಮ್ಮದಿ ದೊರೆಯುತ್ತದೆ ಎಂಬ ದಿವ್ಯ ಸಂದೇಶವೂ ಈ ಅನುಭಾವ ಗೀತೆಯಲ್ಲಿ ಅಂತರ್ಗತವಾಗಿರುವುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ.

**ಬು**ದ್ಧ, ಮಹಾವೀರ, ಶಂಕರಾಚಾರ್ಯ, ಬಸವಣ್ಣ, ಅಲ್ಲಮಪ್ರಭು ಮೊದಲಾದ ಶರಣರು, ಸಂತರು, ಮಹಾನುಭಾವರು ಈ ಜಗತ್ತನ್ನು ಉದ್ಧಾರ ಮಾಡಲು, ಸಮಾಜದಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಲು ಬಂದರು. ಸರಿದಾರಿಯಲ್ಲಿ ನಡೆಸುವ ಮಾರ್ಗದರ್ಶಕರಾಗಿ, ಗುರುಗಳಾಗಿ ಬಂದರು. ಅವರೆಲ್ಲ ಸಮಾಜದಲ್ಲಿ ಬೇರೂರಿರುವ ಜಡತ್ವವನ್ನು ಚೇತನಗೊಳಿಸಲು ಪ್ರಯತ್ನಿಸಿದರು. ''ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧಿತ'' ಎಂದರು. ಏಳಿ ಒಂದಿಷ್ಟು ಕಣ್ಣು ಬಿಡಿ, ಬಲ್ಲವರ ಹತ್ತಿರ ಹೋಗಿ ಜೀವನ ಉದ್ದಾರಮಾಡಿಕೊಳ್ಳಿ ಎಂದು ಸಾರಿದರು. ಇಷ್ಟು ಜನ ಬಂದು ಹೋದರು. ನಾವು ಇದ್ದ ಹಾಗೆಯೇ ಇದ್ದೇವೆ. ಹಾಗೆಯೇ ಮಲಗಿದ್ದೇವೆ. ಆದರೆ ಒಂದು ದುರಂತವೆಂದರೆ ಅವರು ಹೇಳಿದ್ದನ್ನು ಕಂಠಪಾಠ ಮಾಡಿ ಗಿಳಿ ಒಪ್ಪಿಸಿದಂತೆ ಒಪ್ಪಿಸುತ್ತೇವೆ. ಅವರ ಮಾತುಗಳಲ್ಲಿ ಸುಪ್ತವಾಗಿರುವ ಸತ್ಯವನ್ನು ಹುಡುಕುವುದಿಲ್ಲ. ಆ ಬಗ್ಗೆ ಪ್ರಯತ್ನಪಡುವುದೂ ಇಲ್ಲ. ಹಾಗೆ ನೋಡಿದರೆ ನಾವಿನ್ನು ಎದ್ದೇ ಇಲ್ಲ. ನಾವು ಜಾಗ್ರತಾವಸ್ಥೆಗೆ ಬರಬೇಕಾದರೆ ಆ ಮಹಾಪುರುಷರು ಬೋಧಿಸಿದ ಅನುಭಾವ ತತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡು ಆಚರಣೆಗೆ ತರಬೇಕು.

**ಋ**ಷಿಗಳು ಋತ (ಸತ್ಯ)ವನ್ನು ಕಂಡವರು. ಅವರು ಲೌಕಿಕಕ್ಕಿಂತ ಅಲೌಕಿಕ ಸತ್ಯವನ್ನು ಅನುಭವಿಸಿದವರು. ಅವರು ಕಣ್ಣು ಹಾಗೂ ಮತಿಗಳನ್ನು ಬಳಸದೆ ಸತ್ಯವನ್ನು ಕಂಡವರು. ಸತ್ಯದರ್ಶನ ಇಲ್ಲದೆ ಋಷಿ, ಗುರು, ಶರಣ ಆಗಲಾರ. ಋಷಿಯಾದವನ ಮಾತೆಲ್ಲವೂ ಮಂತ್ರವಾಗುತ್ತದೆ. ಆ ಮಂತ್ರಗಳು ವ್ಯಕ್ತಿಯನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವ ದಾರಿದೀಪ. ಹಾಗೆಯೇ ಗುರುವಿನ ಮಾತು ಜ್ಯೋತಿ ಸ್ವರೂಪ. ಅದನ್ನೇ ಶರಣರು **'ಮಾತೆಂಬುದು ಜ್ಯೋತಿರ್ಲಿಂಗ'** ಎಂದು ಕರೆದರು. ಅಂತ ಗುರು ಸದಾ ನಮ್ಮ ಹೃದಯದಲ್ಲಿ ನಿಂತು ಸತ್ಯದ ದಾರಿಯನ್ನು ತೋರಿಸುವ ಮಹಾಜ್ಯೋತಿಸ್ವರೂಪ, ಅದಕ್ಕೆ ಶರಣರು 'ಕರುಣ ರಸದ ಕೊಡಿವರಿವ ಕಟಾಕ್ಷದ ಪರತತ್ವ ಅರುಪುವ ಅಲಾಪದ ವರಪುಣ್ಯಮಯ ಶರೀರದ ನಿರಾಭಾರಿ ಸದ್‌ಗುರು ಇರಲೆನ್ನ ಮಾನಸದಲ್ಲಿ'[೩] ಎಂದು ಪ್ರಾರ್ಥಿಸಿದ್ದಾರೆ.

**ಬೃ**ಹದಾರಣ್ಯಕ ಉಪನಿಷತ್ತಿನಲ್ಲಿ ಒಂದು ಕತೆ ಬರುತ್ತದೆ. ಒಬ್ಬ ಮನುಷ್ಯ ದಾರಿಯಲ್ಲಿ ಹೋಗುತ್ತಿದ್ದ. ಆತನ ಹತ್ತಿರ ಒಂದಿಷ್ಟು ಸಂಪತ್ತಿತ್ತು. ದಾರಿ ನಿರ್ಜನವಾಗಿತ್ತು. ಅಲ್ಲಿ ಡಕಾಯಿತರು ಬಂದರು, ಸಂಪತ್ತನ್ನೆಲ್ಲವನ್ನು ಕಸಿದುಕೊಂಡರು. ಆ ಬಳಿಕ ಸುಮ್ಮನೆ ಬಿಟ್ಟು ಬಿಡಲಿಲ್ಲ. ಕಣ್ಣು ಕಟ್ಟಿ ದಟ್ಟವಾದ ಅರಣ್ಯದಲ್ಲಿ ಬಿಟ್ಟರು. ಅಲ್ಲಿ ಯಾರೂ ಇಲ್ಲ, ಭಯಂಕರವಾದ ಅರಣ್ಯ, ಕಣ್ಣು ಕಾಣದು, ಕೈಕಟ್ಟಿದ್ದಾರೆ. ಇಂತಹ ಅಸಹಾಯಕ ಪರಿಸ್ಥಿತಿಯಲ್ಲಿ ಆತ ಭಗವಂತನನ್ನು ಭಕ್ತಿಯಿಂದ ಪ್ರಾರ್ಥಿಸಿದ. ಅಲ್ಲಿಗೆ ಒಬ್ಬ ವ್ಯಕ್ತಿ ಬಂದ. ಆತ ಅನಿಮಿತ್ತ ಬಂಧುವಾಗಿ ಬಂದ. ಕರುಣೆಯಿಂದ ಅವನನ್ನು ನೋಡಿ ಕಣ್ಣು ಕೈ ಬಿಚ್ಚಿದ. 'ಈ ದಾರಿಯಿಂದ ನೀನು ಹೋಗು' ಎಂದು ದಾರಿ ತೋರಿಸಿದ.

**ಹಾ**ಗೆಯೆ ಬದುಕು ಕೂಡ ಒಂದು ಕಾಡು, ಅದು ವಿಸ್ತಾರವಾಗಿದೆ, ದಟ್ಟವಾಗಿದೆ. ಇಂಥಲ್ಲಿ ನಮ್ಮನ್ನು ಯಾರೋ ತಂದು ಬಿಟ್ಟಿದ್ದಾರೆ. ನಾವು ಕಣ್ಣು ತೆರೆದಾಗ ಕಂಡದ್ದು ಒಂದು ಮನೆ, ತಂದೆ, ತಾಯಿ, ನಾವು ಎಲ್ಲಿಂದ ಬಂದೆವು ಎಂಬುದು ಗೊತ್ತಿಲ್ಲ. ಮುಂದೆ ಏನಾಗುತ್ತದೆ ಎಂಬುದು ಗೊತ್ತಿಲ್ಲ. ನಾವು ಕಲಿತಿರಬಹುದು. ಗಳಿಸಿರಬಹುದು ಆದರೆ ಬಾಳಿನ ಹಿಂದು ಮುಂದಿನದು ನಮಗೆ ಕಾಣದು; ತಿಳಿಯದು. ತಿಳಿದವರು ನಮಗೆ ಸಂಧಿಸಿಲ್ಲ, ಉಳಿದವರೆಲ್ಲ ಕಣ್ಣು ಕೈ ಕಟ್ಟಿಸಿಕೊಂಡವರೇ, ಎಲ್ಲರೂ ಇದೇ ಸಾಂಸಾರಿಕ ಘೋರ ಅರಣ್ಯದಲ್ಲಿ ಸಿಲುಕಿದವರೇ.

**ಇಂ**ಥ ಸ್ಥಿತಿಯಲ್ಲಿ ಯಾರು ನಮ್ಮ ಕಣ್ಣು ಬಿಚ್ಚುತ್ತಾರೆ. ಯಾರು ನಾವು ಸವೆಸಬೇಕಾದ ಮಾರ್ಗವನ್ನು ನಿಖರವಾಗಿ ತೋರಿಸುತ್ತಾರೆ, ನಾವೆಲ್ಲಿ ಇದ್ದೇವೆ ಎಂದು ತೋರಿಸಿಕೊಡುತ್ತಾರೆ. ಅವರೇ ಆಚಾರ್ಯರು. **'ಆಚಾರ್ಯವಾನ್ ಪುರುಷೋವೇದ'** ಯಾರಿಗೆ ಇಂತಹ ಆಚಾರ್ಯರು ಸಿಕ್ಕುವರೋ ಅಂತಹವರು ತಾವು ಮುಟ್ಟಬೇಕಾದ ಗುರಿಯನ್ನು, ಸೇರಬೇಕಾದ ದಾರಿಯನ್ನು ಸೇರುತ್ತಾರೆ. ಹೊರಗೆ ಒಂದು ಸೂರ್ಯ ಬೆಳಗುತ್ತದೆ. ಒಳಗೆ ಜ್ಞಾನದ ಚಂದ್ರ ಮೂಡಿದ್ದಾನೆ ಎಂದೇ ಹೊರಗಿನ ಜಗತ್ತು ಹಾಗೂ ಅಂತರಂಗದೊಳಗಿನ ಭಾವನೆಗಳು, ವಿಚಾರಗಳು ಕಾಣುತ್ತವೆ. ಈ ಸೂರ್ಯ ಆಚಾರ್ಯ. ಈ ಅಂತರಂಗದೊಳಗಿರುವ ಜ್ಞಾನವೇ ಆಚಾರ್ಯ. ಕಣ್ಣು ತೆರೆಸಬಲ್ಲ ಯಾವುದೇ ವ್ಯಕ್ತಿ ಈ ಜಗತ್ತಿನೊಳಗಿರಲಿ, ಯಾವ ಜಾತಿ, ಮತ, ಪಂಥದವನೇ ಆಗಿರಲಿ ಆತನೆ ಶ್ರೇಷ್ಠ ಆಚಾರ್ಯ.

*(ಮುಂದುವರೆಯುತ್ತದೆ)*

೩. ಶ್ರೀ ಸಿದ್ಧೇಶ್ವರ ಸ್ವಾಮಿಗಳು, ಭಗವಚ್ಚಿಂತನೆ, ಪುಟ ೧೨೪.







# ಕುವೆಂಪು ಅವರ ''ವಿಶ್ವಮಾನವ ಸಂದೇಶ''

– ಶ್ರೀಮತಿ ಬಿ.ಎಸ್. ಗಂಗನಹಳ್ಳಿ
ಕೆ.ಬಿ.ಎಂ.ಪಿ.ಎಸ್. ಮುದ್ದೇಬಿಹಾಳ,
ಬೆಚಣನ ಕಲ್ಲು ಅಂಚೆ, ಮುದ್ದೇಬಿಹಾಳ ತಾಲ್ಲೂಕು,
ಬಿಜಾಪುರ ಜಿಲ್ಲೆ.

**ಕ**ನ್ನಡ ಸಾಹಿತ್ಯದ ಅಗ್ರಮಾನ್ಯ ಕವಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ರಾಷ್ಟ್ರಕವಿ ಕುವೆಂಪು ಅವರು ದೇಶ-ಭಾಷೆ, ಜಾತಿ-ಮತ-ಪಂಥಗಳನ್ನು ಮೀರಿ ಬೆಳೆದು ನಿಂತವರು. ಕುವೆಂಪು ಅವರು ನಾಡು-ನುಡಿಯ ಬಗ್ಗೆ ಗಂಭೀರವಾಗಿ ಚಿಂತಿಸಿದವರು. ಅವರ ವಾಣಿ ವಿಶ್ವವಾಣಿಯಾಗಿ ಮೊಳಗಿತು. ಅವರ ಸಂದೇಶ ವಿಶ್ವಮಾನ್ಯವಾಯಿತು. ಮತಭಾವನೆಯ ದೃಷ್ಟಿಯಲ್ಲಿ ಅವರದು ಮನುಜಮತ-ವಿಶ್ವಪಥವಾಯಿತು. ''ಮಾನವಕುಲ ತಾನೊಂದೆ ವೆಲಂ'' ಎಂಬುದು ಅವರ ಧ್ಯೇಯ ವಾಕ್ಯವಾಯಿತು. ಪೂರ್ಣದೃಷ್ಟಿಯೆಡೆಗೆ ಸಾಗಿದ ಅವರ ಅಂತರಾತ್ಮ ''ಓ ನನ್ನ ಚೇತನ ಆಗು ನೀ ಅನಿಕೇತನ'' ಎಂದು ಹೇಳುವುದರ ಮೂಲಕ ಸರ್ವರ ಅಂತಶ್ಯಕ್ತಿಯನ್ನು ಬಡಿದೆಬ್ಬಿಸಿ ವಿಚಾರಕ್ರಾಂತಿಗೆ ಆಹ್ವಾನ ನೀಡಿದರು.

**ಸ**ಮಾಜದಲ್ಲಿ ತಾಂಡವಾಡುತ್ತಿರುವ ಜಾತಿ ಸಮಸ್ಯೆಯನ್ನು ಕುರಿತು ಅರ್ಥಪೂರ್ಣವಾಗಿ ತಮ್ಮ ಕವನದ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ.

*''ಆ ಮತದ ಈ ಮತದ ಹಳೆಮತದ ಸಹವಾಸ*
*ಸಾಕಿನ್ನು ಸೇರಿರೈ ಮನುಜ ಮತಕೆ*
*ಓ ಬನ್ನಿ ಸೋದರರೆ ವಿಶ್ವಪಥಕೆ*
*ಗುಡಿ ಚರ್ಚು ಮಸಜೀದುಗಳ ಬಿಟ್ಟು ಹೊರಬನ್ನಿ*
*ಬಡತನದ ಬುಡಮುಟ್ಟಿ ಕೀಳಬನ್ನಿ*
*ಮೌಢ್ಯತೆಯ ಮಾರಿಯನು ಹೊರದೂಡಲೈ ತನ್ನಿ*
*ವಿಜ್ಞಾನ ದೀವಿಗೆಯ ಹಿಡಿಯಬನ್ನಿ.*

ಮತ ತೊಲಗಿ ''ಆಧ್ಯಾತ್ಮ'' ಮಾತ್ರ ವೈಜ್ಞಾನಿಕ ತತ್ತ್ವವಾಗಿ ಮಾನ್ಯತೆ ನಡೆಯಬೇಕೆಂಬುದು ಕವಿ ಕುವೆಂಪು ಅವರ ಸಂದೇಶ. ಹಾಗೆಯೇ ಜಾತಿ-ಮತ-ಭೇದ, ಮೂಢಸಂಪ್ರದಾಯಗಳಿಗೆ ಮಾರು ಹೋಗದೇ ಹೊಡೆದಾಟ-ಬಡಿದಾಟ ಮುಂತಾದ ವೈಷಮ್ಯಗಳನ್ನು ಬೆಳೆಸಿಕೊಳ್ಳದೇ ಎಲ್ಲರೂ ನಾವು ಒಂದೇ ಎನ್ನುವ ಮಂತ್ರ ಸಾರಿದರು.

**ದೇ**ಶ-ಭಾಷೆ ಗಳನ್ನು ಕಡೆಗಣಿಸಿ, ವಿದೇಶಿ ನಾಗರಿಕತೆಯ ಆಕರ್ಷಣೆಗೆ ಒಳಗಾಗಬಾರದೆಂದು ಕವಿ ಹೀಗೆ ಹೇಳಿದ್ದಾರೆ.

*''ನಮ್ಮ ಸೊಡರಿಗೆ ಮನೆಯ ಬೆಳಗುವುದೇ*
*ಮೊದಲ ಗುರಿ*
*ದೂರದ ನೆಲವ ಬೆಳಗಲಿಲ್ಲವೆಂದು*
*ಕೊರಗುವರೆ?*

ಇಂತಹ ಹಲವು ಮಾತುಗಳಿಂದ ಕವಿ ನಮ್ಮನ್ನು ದೇಶೀ ಸಂಸ್ಕೃತಿಗೆ ಕರೆತರುತ್ತಾರೆ.

*''ಯಾವ ಕಾಲದ ಶಾಸ್ತ್ರ ಏನು ಹೇಳಿದರೇನು?*
*ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು?*
*ನಿನ್ನದೆಯ ದನಿಯೆ ಋಷಿ! ಮನು ನಿನಗೆ ನೀನು!*

ಈ ನಿಟ್ಟಿನಲ್ಲಿ ಧರ್ಮಶಾಸ್ತ್ರಗಳನ್ನೆಲ್ಲಾ ದೂರವಿಡಬೇಕೆಂದು ಹೇಳಿದ್ದಾರೆ.

ಕವಿ ಕುವೆಂಪು ಅವರು ಕನ್ನಡ-ನಾಡು-ನುಡಿಗಾಗಿ ಸಲ್ಲಿಸಿದ ಸೇವೆ ಅನುಪಮವಾದುದು. ಸಾಹಿತ್ಯದ ಮೂಲಕ ಆದರ್ಶ ಸಮಾಜವನ್ನು ಕಟ್ಟಬಯಸಿದವರು. ಅವರ ಬದುಕು ಬರಹ ಒಂದೇ ಆಗಿತ್ತು. ಅವರು ಒಂದೆಡೆ ಹೀಗೆಂದಿದ್ದಾರೆ. ''ನನ್ನ ಸಾಹಿತ್ಯ ಉದ್ಭವಿಸುವುದು ಬದುಕಿನಿಂದ, ಬದುಕಿಗಾಗಿ ಮತ್ತು ಬದುಕಿನಾಚೆಯ ಬದುಕಿಗಾಗಿ'' ಎನ್ನುವಲ್ಲಿ ಅವರು ಸಾಧಿಸಿದ ಮೌಲ್ಯ ಎಂಥ ಉನ್ನತಮಟ್ಟದ್ದಾಗಿತ್ತು ಎಂಬುದನ್ನು ಸಾರಿ ಹೇಳುವಂತಿದೆ.

ಕನ್ನಡ ನಾಡು-ನುಡಿಗಳನ್ನು ಅವರು ಸ್ವರ್ಗಕ್ಕಿಂತಲೂ ಮಿಗಿಲೆಂದು ಭಾವಿಸಿದ ದಾರ್ಶನಿಕ ಕವಿ.

*''ಎಲ್ಲಾದರೂ ಇರು ಎಂತಾದರೂ ಇರು ಎಂದೆಂದಿಗೂ ನೀ ಕನ್ನಡವಾಗಿರು''*

*''ಬಾರಿಸು ಕನ್ನಡ ಡಿಂಡಿಮವ, ಓ ಕರ್ನಾಟಕ ಹೃದಯಶಿವ''*

ಎಂದು ಹೇಳಿ ಕನ್ನಡಿಗರ ಕೆಚ್ಚನ್ನು ಕೆರಳಿಸಿದ್ದಾರೆ. ಕನ್ನಡ ನಾಡು-ನುಡಿಗಳನ್ನು ಎಷ್ಟು ವರ್ಣಿಸಿದರೂ ಕವಿಯ ಮನ ತಣಿಯದು.

*''ಕನ್ನಡಕ್ಕಾಗಿ ಕೈಯೆತ್ತು ನಿನ್ನ ಕೈ ಕಲ್ಪವೃಕ್ಷವಾಗುತ್ತದೆ*
*ಕನ್ನಡಕ್ಕಾಗಿ ಕೊರಳೆತ್ತು ಅಲ್ಲಿ ಪಾಂಚಜನ್ಯ ಮೊಳಗುತ್ತದೆ*
*ಕನ್ನಡಕ್ಕಾಗಿ ಕಿರಿಬೆರಳೆತ್ತಿದರೂ ಸಾಕು ಅದು ಗೋವರ್ಧನ ಗಿರಿಯಾಗುತ್ತದೆ''*

ಎಂಬಲ್ಲಿ ಕವಿ ಕುವೆಂಪು ನಾಡು-ನುಡಿಗಳ ಗಿರಿಶಿಖರಕ್ಕೇರಿಸಿ ಮಹತ್ವವನ್ನು ಹಾಡಿ ಹೊಗಳಿದ್ದಾರೆ. ಕನ್ನಡ ಭಾಷೆಯನ್ನು ಯಥೇಚ್ಛವಾಗಿ ವರ್ಣಿಸಿದ ಕವಿ ಇನ್ನುಳಿದ ದೇಶ-ಭಾಷೆಗಳಿಗೂ ಮಾನ್ಯತೆಕೊಟ್ಟರು. ''ಭರತಖಂಡಕ್ಕೀಗ ಬಹುಭಾಷೆಗಳ ಅಗತ್ಯವಿದೆ. ವೈಜ್ಞಾನಿಕ ಅವಶ್ಯಕತೆಗಾಗಿ ಇಂಗ್ಲೀಷ್, ಜರ್ಮನ್, ರಷ್ಯನ್ ಮುಂತಾದ ಭಾಷೆಗಳನ್ನು ನಮ್ಮ ಜನ ಕಲಿಯಬೇಕಾಗಿದೆ'' ಎಂದಿದ್ದಾರೆ.

''ಕವಿ ಕುವೆಂಪು ಅವರು ಬಂಡಾಯಗಾರರಲ್ಲಿ ಬಂಡಾಯಗಾರರು'' ರಾಷ್ಟ್ರಕಲ್ಯಾಣಕಾಂಕ್ಷೆಯ ದೃಷ್ಟಿಯಿಂದ ಸಾಮಾಜಿಕ ಕಳಕಳಿಯನ್ನು ತಮ್ಮ ಜೀವನದ ಧ್ಯೇಯವನ್ನಾಗಿಸಿಕೊಂಡವರು. ಆಧ್ಯಾತ್ಮ ಸಾಧನೆ ಕುವೆಂಪು ಅವರ ಜೀವನಾದರ್ಶ, ಅದೇ ಅವರ ಜಾಯಮಾನಂ ಆಧ್ಯಾತ್ಮ ದೃಷ್ಟಿಯಿಂದ ಜಗತ್ತನ್ನು ನೋಡುವ, ದಾರ್ಶನಿಕ ಕವಿ ಎಂದು ಹೇಳಬಹುದು – ಅಲ್ಲದೇ ಅವರ ''ಹಾಳೂರು'' ನೀಳ್ಗವಿತೆಯಿಂದ ಹಿಡಿದು ''ಶ್ರೀ ರಾಮಾಯಣದರ್ಶನಂ'' ಮಹಾಕಾವ್ಯದವರೆಗೆ ಹಲವಾರು ಕತೆ, ಕಾದಂಬರಿ, ಭಾವಗೀತೆ, ನಾಟಕ, ಕಾವ್ಯವಿಮರ್ಶೆ ಮುಂತಾದ ಕೃತಿಗಳಲ್ಲಿ ಸಾಮಾಜಿಕ ಕಳಕಳಿ ದಟ್ಟವಾಗಿ ಮೈಗೂಡಿದೆ. ''ತರುಣರೇ ಎದ್ದೇಳಿ'', ''ಧನ್ವಂತರಿ ಚಿಕಿತ್ಸೆ'', ''ಮಲ್ಲಗೀತೆ'', ''ದೇವರು ಪೂಜಾರಿ'', ''ಮೌಢ್ಯಮೇಧ'' ಮುಂತಾದ ಕವಿತೆಗಳಲ್ಲಿ ಬೇರೆಲ್ಲಿಯೂ ಕಾಣದ ವೈಚಾರಿಕತೆ ಎದ್ದು ತೋರುತ್ತದೆ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯುತ್ಕೃಷ್ಟವಾದ ಬರವಣಿಗೆ ಕವಿ ಕುವೆಂಪು ಅವರದು. ಅಂತೆಯೇ ಹಲವಾರು ಅತ್ಯುನ್ನತ ಪ್ರಶಸ್ತಿಗಳು, ಬಹುಮಾನಗಳು, ಸ್ಥಾನಮಾನಗಳು ಅವರನ್ನು ಅರಸಿ ಬಂದವು.

ಕೇವಲ ಕವಿಯಾಗಿ ಕವಿತೆ ಕಾವ್ಯ, ಗ್ರಂಥಗಳನ್ನು ಬರೆಯದೇ ಅಧ್ಯಾಪಕರಾಗಿ, ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ಮೈಸೂರು ವಿಶ್ವವಿದ್ಯಾಲಯದ ಕುಲಪತಿಯಾಗಿ ಜವಾಬ್ದಾರಿಯುತ ಸೇವೆಯನ್ನು ಸಲ್ಲಿಸಿದ್ದಾರೆ.

ಒಟ್ಟನಲ್ಲಿ ಕುವೆಂಪು ಅವರು ಒಬ್ಬ ವ್ಯಕ್ತಿಯಲ್ಲ; ಅವರು ಒಂದು ''ಶಕ್ತಿ'' ಎಂದೇ ಹೇಳಬಹುದು. ಇಡೀ ವಿಶ್ವಕ್ಕೆ ವಿಹಿತವಾಗುವಂತಹ ವಿಚಾರ ಅವರದು. ಅಂತೆಯೇ ಅವರನ್ನು ''ವಿಶ್ವಮಾನವ'' ಎಂದು ಕರೆಯುವುದರಲ್ಲಿ ಔಚಿತ್ಯವಿದೆ.

★

## ಸಿದ್ಧಗಂಗಾ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಸನ್ಮಾನ್ಯರೇ,

ಸಿದ್ಧಗಂಗಾ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ನಾವು ಮಾಡಿಕೊಂಡ ಮನವಿಗೆ ಸ್ಪಂದಿಸಿದ ೧೦೦ ಮಂದಿ ಆಜೀವ ಸದಸ್ಯರು ೧,೦೦೦ ರೂ.ಗಳಿಗೆ ಸರಿಹೊಂದುವಂತೆ ಉಳಿಕೆ ಹಣವನ್ನು ಸಂದಾಯ ಮಾಡಿರುತ್ತಾರೆ. ಅವರಿಗೆ ನಮ್ಮ ಧನ್ಯವಾದಗಳು. ದಯಮಾಡಿ ಬಾಕಿ ಇರುವ ಎಲ್ಲಾ ಸದಸ್ಯರುಗಳು ಉಳಿಕೆ ಹಣವನ್ನು ಕಳುಹಿಸಿಕೊಟ್ಟು ಸಹಕಾರ ನೀಡಿ ಪತ್ರಿಕೆಯ ಪ್ರಗತಿಗೆ ಕಾರಣರಾಗಬೇಕೆಂದು ವಿನಮ್ರಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ಹೆಚ್.ಬಿ. ಗಂಗಾಧರಯ್ಯ
ಪ್ರಕಾಶಕರು





# ಮೇಧಾಶಕ್ತಿ

– ಎಂ. ಮಾಧವ ಪೈ
''ಶ್ರೀನಿವಾಸ'', ಡಿ.ವಿ.ಎಸ್. ಹೈಸ್ಕೂಲ್ ಸಮೀಪ,
ಮೊದಲನೇ ಹಂತ, ವಿನೋಬ ನಗರ,
ಶಿವಮೊಗ್ಗ – 577 204.
ದೂರವಾಣಿ : (08182) 248717

*ಮೆಲ್ಲಮೆಲ್ಲನೆ ಭಕ್ತನೆನಿಸಿಕೊಂಬೆ*
*ಮೆಲ್ಲ ಮೆಲ್ಲನೆ ಮಹೇಶ್ವರನೆನಿಸಿಕೊಂಬೆ*
*ಮೆಲ್ಲಮೆಲ್ಲನೆ ಪ್ರಸಾದಿಯೆನಿಸಿಕೊಂಬೆ*
*ಮೆಲ್ಲಮೆಲ್ಲನೆ ಪ್ರಾಣಲಿಂಗಿಯೆನಿಸಿಕೊಂಬೆ*
*ಮೆಲ್ಲಮೆಲ್ಲನೆ ಶರಣನೆನಿಸಿಕೊಂಬೆ*
*ಮೆಲ್ಲಮೆಲ್ಲನೆ ಐಕ್ಯನೆನಿಸಿಕೊಂಬೆ*
*ಮೆಲ್ಲಮೆಲ್ಲನೆ ಪಟ್ಸ್ಥಳವ ಮೀರಿ*
*ನಿರವಯಸ್ಥಲವನೆಯ್ದುವೆನಯ್ಯಾ*
*ಕೂಡಲಸಂಗಮದೇವಾ //*

ಈ ವಚನದ ಮೂಲಕ ಬಸವಣ್ಣನವರು ಒಂದು ವಿಷಯವನ್ನು ನಮ್ಮೆದುರಿಗೆ ಇಟ್ಟಿದ್ದಾರೆಂದು ನನಗನಿಸುತ್ತದೆ.

ಭಕ್ತನಿಂದ ಹಿಡಿದು ನಿರವಯಸ್ಥಲವನೆಯ್ದುವತನಕ ಮೆಲ್ಲನೆ ಸಾಗುತ್ತೇನೆಂದು ಹೇಳಿರುವಲ್ಲಿ ತಾನು ಹಿಡಿದ ಸಾಧನೆಯನ್ನು ಅವಸರ ಪಡದೆ, ಪೂರೈಸಿಕೊಳ್ಳುವ ಭಾವನೆಯನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ. ಮೆಲ್ಲಮೆಲ್ಲನೆ ಸಾಗಬೇಕು ಎಂಬುದನ್ನು ಸ್ಮೃತಿಯಲ್ಲಿಟ್ಟು ಸಾಗುವಾಗ ನಡುವೆ ಮನಸ್ಸೇ ಮರ್ಕಟ, ಮನಸ್ಸನ್ನು ಚಂಚಲಿಸಿ, ಸಾಧನಾ ಪಥದಿಂದ ಜಾರಿಬೀಳುವಂತೆ ಮಾಡಬಹುದು. ಅಂತಹ ಸಮಯದಲ್ಲಿಯೂ ತಾನು ಸಾಧಿಸಬೇಕಾದುದೇನಿದೆ, ಅದನ್ನು ಮರೆಯದೆ ಇರುವುದು, ಅಂದರೆ ತಾನು ಸಾಧಿಸಬೇಕಾದುದನ್ನು ಬುದ್ಧಿಯು ನೆನಪಿನಲ್ಲಿಟ್ಟಿರುವುದು ಮುಖ್ಯ. ಸಾಧಿಸಬೇಕಾದುದನ್ನು ಬುದ್ಧಿ ಧಾರಣ ಮಾಡಿಕೊಳ್ಳದೆ ಬಿಟ್ಟಿತು ಎಂದರೆ ಗುರಿಮುಟ್ಟಲು ಸಾಧ್ಯವಿಲ್ಲ. ಗುರಿ ಮುಟ್ಟಲೇಬೇಕಾದರೆ ನಾವು ಏನನ್ನು ಸಾಧಿಸಬೇಕೆಂದಿದ್ದೇವೋ ಅದನ್ನು ಮರೆಯದೆ ನಮ್ಮ ಬುದ್ಧಿಯಲ್ಲಿ ಅದನ್ನು ದೃಢವಾಗಿ ನಿಲ್ಲುವಂತೆ ಉಳಿಸಿಕೊಳ್ಳುವುದು ಅತ್ಯಾವಶ್ಯಕ. ಬುದ್ಧಿಯಲ್ಲಿ ಸ್ಥಿರವಾಗಿ ಇರಿಸಿಕೊಳ್ಳುವ ಧಾರಣಶಕ್ತಿಯೇ ಮೇಧಾಶಕ್ತಿ.

ಈ ಮೇಧಾಶಕ್ತಿಗೆ ಪ್ರಾಚೀನ ಕಾಲದಿಂದಲೂ ಬಹಳ ಮಹತ್ವ ಕೊಡುತ್ತಾ ಬಂದಿದ್ದಾರೆ.

ಅಗ್ನಿಗೆ ಮಾಡುವ ಪ್ರಾರ್ಥನೆ ಈ ರೀತಿ ಇದೆ – ''ಓಂ ಸ್ವಸ್ತಿ ಶ್ರದ್ಧಾಂ ಮೇಧಾಂಯಶಃ ಪ್ರಜ್ಞಾ ವಿದ್ಯಾ ಬುದ್ಧಿಂ ಶ್ರಿಯಂ ಬಲಮ್ ಆಯುಷ್ಯಂ ತೇಜಮಾರೋಗ್ಯಂ ದೇಹಿ ಮೇ ಹವ್ಯವಾಹನಃ। ದೇಹಿಮೇ ಹವ್ಯವಾಹನಃ। ದೇಹೀ ಮೇ ಹವ್ಯವಾಹನಃ'' – ಎಲೇ ಅಗ್ನಿಯೇ; ಸ್ವಸ್ತಿ ಶ್ರದ್ಧಾ, ಮೇಧಾ, ಯಶ, ಪ್ರಜ್ಞೆ, ವಿದ್ಯೆ, ಬುದ್ಧಿ, ಶ್ರೀ, ಬಲ, ಆಯುಷ್ಯ, ತೇಜಸ್ಸು ಮತ್ತು ಆರೋಗ್ಯ – ಇವುಗಳನ್ನು ನನಗೆ ನೀಡು, ಎಂದು ಮೂರು ಸಲ ಪ್ರಾರ್ಥಿಸುವುದಿದೆ. ಹೀಗೆ ಮೂರು ಬಾರಿ ಬೇಡುವುದರ ಅಂತರಾರ್ಥವೇನೆಂದರೆ, ಇವೆಲ್ಲವೂ ನನಗೆ ಅತ್ಯಂತ ಅವಶ್ಯಕವಾದವುಗಳು, ನಮಗೆ ಅತಿ ಅವಶ್ಯಕವಾದವುಗಳು ಎಂದು ನಾವು ಬೇಡಿದವುಗಳಲ್ಲಿ ಒಂದು 'ಮೇಧಾ' ಎಂಬುದು. ಈ ಮೇಧಾ ಎಂದರೇನು?

ಮೇಧಾ ಎಂದರೆ ಬುದ್ಧಿ ಪ್ರಜ್ಞೆ, ತಿಳುವಳಿಕೆ ಎಂದು ಸಾಮಾನ್ಯವಾಗಿ ಅರ್ಥ ಹೇಳಲಾಗುತ್ತದೆ. ಆದರೂ ಇದರ ವಿಶಿಷ್ಟಾರ್ಥವೆಂದರೆ ಯಾವುದೇ ವಿಷಯ ನೆನಪಿನಲ್ಲಿ ರಕ್ಷಿಸಿಕೊಂಡು (ಧಾರಣಮಾಡಿಕೊಂಡು) ಇಡುವ ಬುದ್ಧಿಶಕ್ತಿ (ಮನೋಶಕ್ತಿ); ಅಂದರೆ ಕಲಿತದ್ದು, ಓದಿದ್ದು, ಆಲಿಸಿದ್ದು, ತಿಳಿದುದು, ತಾಳಿದ ಧ್ಯೇಯ, ಮುಟ್ಟುವ ಗುರಿ, ಯಾವುದೇ ಇರಲಿ ಅದನ್ನು ಎಂದೆಂದಿಗೂ ಮರೆಯದೆ ನೆನಪಿನಲ್ಲಿ ಧಾರಣ ಮಾಡಿಕೊಂಡಿರುವ, ಉಳಿಸಿಕೊಳ್ಳುವ ಮನಸ್ಸಿನ, ಬುದ್ಧಿಯಶಕ್ತಿ, ಚಿತ್ತದಲ್ಲಿ ಸ್ಥಿರವಾಗಿ ಉಳಿಸಿಕೊಳ್ಳುವ ಶಕ್ತಿ. 'ಧೀರ್ಧಾರಣವತೀ ಮೇಧಾ' ಎಂದು ಅಮರಕೋಶ ಸ್ಪಷ್ಟಪಡಿಸುತ್ತದೆ. ವೇದ ಮತ್ತು ಮೇಧಾಗಳಿಗೆ ಪರಸ್ಪರ ಅನನ್ಯತೆ ಇದೆ. ಮೊದಲು ವೇದ ತಿಳಿದುಕೊಳ್ಳುವುದು, ಆ ಮೇಲೆ ಮೇಧಾ ಅಂದರೆ ಅದು ಮನಸ್ಸಿನಲ್ಲಿ (ಬುದ್ಧಿಯಲ್ಲಿ) ಧಾರಣಮಾಡಿಕೊಂಡಿರುವುದು ನೆನಪಿನಲ್ಲಿಟ್ಟುಕೊಳ್ಳುವುದು (ಉಳಿಸಿಕೊಳ್ಳುವುದು). ಆಗ ಮಾತ್ರ ಜ್ಞಾನ ವೃದ್ಧಿಯಾಗುತ್ತದೆ. ಇಂತಹ ಶಕ್ತಿಯುಳ್ಳವನೇ ಮೇಧಾವಿ.

ಮಹಾಬುದ್ಧಿವಂತನಿಗೆ ನಾವು ಮೇಧಾವಿಯೆಂದು ಹೇಳುತ್ತೇವೆ. ಆದರೆ ಬುದ್ಧಿಯಿದ್ದವರೆಲ್ಲ ಮೇಧಾವಿಗಳಲ್ಲ, ಬುದ್ಧಿವಂತರಿರಬಹುದು; ಆದರೆ ಬುದ್ಧಿವಂತರೆಲ್ಲ ಮೇಧಾವಿಯಾಗಲಾರರು. ಹೆಚ್ಚು ಓದಿದ ಪುಸ್ತಕ ಪಂಡಿತರು ಮೇಧಾವಿಯೆಂದು ಕರೆಯಿಸಿಕೊಳ್ಳಲು ಶಕ್ತರಿರುವುದಿಲ್ಲ. ಮೇಧಾವಿಯೆಂದು ಕರೆಯಿಸಿಕೊಳ್ಳಬೇಕಾದರೆ ಬುದ್ಧಿವಂತಿಕೆಗಿಂತ ಮಿಗಿಲಾದ ಒಂದು ಶಕ್ತಿಯ ಅವಶ್ಯಕತೆಯಿದೆ. ಅದೆಂದರೆ ಪಾಂಡಿತ್ಯಗಳಿಸಿದ ವಿಷಯ ಎಂದೆಂದಿಗೂ ಮರೆತು ಹೋಗದೆ ನೆನಪಿನಲ್ಲಿ ಉಳಿಸಿಕೊಳ್ಳುವಶಕ್ತಿ. ಇಂತಹ ಶಕ್ತಿ ಇರುವ ಪಂಡಿತ, ಜ್ಞಾನಿ ಉಚ್ಚಶಿಕ್ಷಣ ಪಡೆದವನು, ಋಷಿ, ಶಾಸ್ತ್ರಿ, ಭಕ್ತ, ಶರಣರಾದಿ ಮಾನವರು ಮೇಧಾವಿಯೆಂದು ಹೇಳಿಸಿಕೊಳ್ಳಲು ಶಕ್ತರು. ಮೇಧಾವಿ ಎಂಬುದಕ್ಕೆ ಸರಸ್ವತಿಯದ್ದೇ ರೂಪ ಎಂಬ ಅರ್ಥ ಇರುವುದೇ ಮೇಧಾವಿ ಪುರುಷನು ಸರಸ್ವತಿಯದ್ದೇ ರೂಪವಾಗಿರುತ್ತಾನೆ ಎಂದ ಸೂಚಿಸುತ್ತದೆ. ದೇವಿ ಸರಸ್ವತಿ ಯಾವ ರೀತಿ ಎಲ್ಲ ವಿದ್ಯೆಗಳನ್ನು ತನ್ನಲ್ಲಿ ಧಾರಣಮಾಡಿಕೊಂಡು, ಸಂಭಾಳಿಸಿಕೊಂಡು

ಇರುತ್ತಾಳೋ ಹಾಗೆಯೇ ಸಕಲ ಪಾಂಡಿತ್ಯವನ್ನು, ಅರಿವನ್ನು ತನ್ನೊಳಗೆ ಸಂಭಾಳಿಸಿಕೊಂಡಿರುವವನು ಮೇಧಾವಿ.

ಮೇಧಾಯೆಂಬ ಶಬ್ದಕ್ಕೆ ಗಿಳಿಯೆಂಬರ್ಥವೂ ಇದೆ. ಗಿಳಿ ಕೇಳಿದ ಅಥವಾ ಕಲಿಸಿದ ನುಡಿಗಳನ್ನು ನೆನಪಿನಲ್ಲಿಟ್ಟುಕೊಂಡು ಅದನ್ನು ಹಾಗೆಯೇ ನುಡಿಯುತ್ತಲೇ ಇರುತ್ತದೆ. ಇದಕ್ಕೆ ಕಾರಣ ಅದಕ್ಕೆ ಕೇಳಿದುದನ್ನು ನೆನಪಿನಲ್ಲಿಟ್ಟುಕೊಳ್ಳುವ ಶಕ್ತಿ ಇದೆ. ಹೀಗಾಗಿ ಅದಕ್ಕೆ ಮೇಧಾವಿ ಎನ್ನುತ್ತಾರೆ. ಕನ್ನಡದಲ್ಲಿ ಗಿಳಿಗೆ ಎಂದು ಹೆಸರಿರುವುದನ್ನು ಇಲ್ಲಿ ನೆನಪುಮಾಡಿಕೊಳ್ಳಬಹುದು. ಗಿಳಿಯಂತೆ ತಾನು ಅಧ್ಯಯನ ಮಾಡಿದುದನ್ನು ನೆನಪಿನಲ್ಲಿ ಉಳಿಸಿಕೊಳ್ಳುವ ಶಕ್ತಿ ಇರುವವನೇ ಮೇಧಾವಿ. ಮೇಧಾವಿ ಎಂಬ ಶಬ್ದಕ್ಕೆ ಮತ್ತುಬರಿಸುವ ಪೇಯ ಎಂಬರ್ಥವೂ ಇದೆ.

ಮೇಲೆ ಉದ್ಧರಿಸಿದ ಪ್ರಾರ್ಥನೆಯಲ್ಲಿ ಮೇಧಾ, ಬುದ್ಧಿ, ಪ್ರಜ್ಞಾ ಎಂಬ ಶಬ್ದಗಳಿವೆ. ಸಾಮಾನ್ಯವಾಗಿ ಅವು ಒಂದೇ ಅರ್ಥದವುಗಳು ಎಂದು ಕಾಣುತ್ತಿದ್ದರೂ ಈ ಮೂರೂ ಶಬ್ದಗಳಿಗೂ ಒಂದೇ ಅನ್ವಯವಾಗುವುದಿಲ್ಲ. ಮಾನವನಿಗೆ ಮೊದಲು ಬುದ್ಧಿ ಇರಬೇಕು. ಆ ಬುದ್ಧಿ ಒಂದು ಮಿತಿಯಲ್ಲಿರಬೇಕು. ಮಿತಿಯಲ್ಲಿರುವ ಬುದ್ಧಿ ವೃದ್ಧಿಸುತ್ತ ಪ್ರಜ್ಞಾಮಟ್ಟಕ್ಕೆ ತಲುಪುತ್ತದೆಯೆಂದಿರುವಾಗ ಕೇವಲ ಬುದ್ಧಿ ಇದ್ದರೆ ಸಾಲದು, ಅದು ಪ್ರಜ್ಞಾಮಟ್ಟಕ್ಕೆ ತಲುಪಬೇಕು ಎನ್ನುವುದು ಸ್ಪಷ್ಟವಾಗುತ್ತದೆ. ಬುದ್ಧಿಯು ಮರ್ಯಾದಾ ಮಿತಿ ಮೀರಿ ಮುಂದುವರಿಯಿತೆಂದರೆ ಮಾನವನು ದಾನವನಾಗುತ್ತಾನೆ. ಮಾನವನು ದಾನವನಾಗದೆ ಆ ಬುದ್ಧಿ ಒಂದು ಮರ್ಯಾದಿತ ಸ್ಥಿತಿಯಲ್ಲಿದ್ದರೆ ಮಾತ್ರ ಪ್ರಜ್ಞಾಮಟ್ಟಕ್ಕೆ ಮುಟ್ಟಿ ಮಾನವ ದೇವನಾಗುವ ಹಂತಕ್ಕೆ ತಲುಪುತ್ತಾನೆ ಎಂಬುದು ಈ ಮೂರು ಶಬ್ದಗಳಿಂದ ತಿಳಿದುಕೊಳ್ಳಬೇಕು. ಬುದ್ಧಿಯು ಮರ್ಯಾದೆಯನ್ನು ಮೀರಿ ಸಾಗದಂತೆ ಇರಲು ಮೇಧಾಯೆಂಬ ಶಕ್ತಿಯು ಕಲಿಸುವುದು. ಬುದ್ಧಿ ಎಂದೆಂದೂ ಅಡ್ಡದಾರಿ ಹಿಡಿಯದಂತೆ, ಅದು ಮರ್ಯಾದಾಸ್ಥಿತಿಯಲ್ಲೇ ಉಳಿಯುವಂತೆ ಸದಾ ನೆನಪಿನಲ್ಲಿ ಇರುವಂತೆ ಮಾಡುವುದೇ ಮೇಧಾ ಎಂಬ ಶಕ್ತಿಯು. ಹೀಗಾಗಿ ಮೇಧಾ ಆತ್ಯವಶ್ಯಕ ವಾಗಿದೆಯೆಂದು ತಿಳಿಯಬೇಕು. ಎಷ್ಟೋ ಮಂದಿ ಮರೆವು ಎಂಬ ರೋಗದಿಂದ ನರಳುತ್ತಿರುವುದನ್ನು ನಾವು ನೋಡಿ, ಕೇಳಿ ಬಲ್ಲೆವು. ಈ ಮರೆವು ಎಂಬುದರಿಂದ ಆಗುವ ಅನಾಹುತವೆಷ್ಟು ಎಂದು ಹೇಳುವುದು ಬಲುಕಷ್ಟ. ಈ ಮರೆವು ಎಂಬ ರೋಗವನ್ನು ಗುಣಪಡಿಸುವ ಔಷಧವೇ ಮೇಧಾ ಎಂದರೆ ತಿಳಿದುದನ್ನು, ಅರಿತುದನ್ನು, ಮಾಡಬೇಕಾದುದನ್ನು, ಕಲಿಯಬೇಕಾದುದನ್ನು, ಕೊಡಬೇಕಾದುದನ್ನು, ಪಡೆಯಬೇಕಾದುದನ್ನು ಇತ್ಯಾದಿ ನೆನಪಿನಲ್ಲಿ, ಮತಿಯಲ್ಲಿ ಉಳಿಯುವಂತೆ ಮಾಡುವುದೇ ಮೇಧಾ ಎಂಬ ಬುದ್ಧಿಧಾರಣ ಮಾಡಿದ ಶಕ್ತಿಯು.

ಅಧ್ಯಯನ, ಅಧ್ಯಾಪನ ಮಾಡುವವರಿಗೆ, ಸಾಧನೆ ಮಾಡಬೇಕೆಂದಿರುವವರಿಗೆ ಈ ಮೇಧಾಶಕ್ತಿ ಎಷ್ಟು ಅವಶ್ಯಕತೆಯದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ.

ಸ್ಮೃತಿ ಎಂದರೂ ನೆನಪು, ಬೋಧ (ಎಚ್ಚರ) ಎಂದು ಅರ್ಥವಿದ್ದರೂ ಸ್ಮೃತಿ ಮತ್ತು ಮೇಧಾಗಳಲ್ಲಿ ವ್ಯತ್ಯಾಸವೇನು ಎಂಬ ಪ್ರಶ್ನೆ ಎದುರಿಗೆ ನಿಲ್ಲುತ್ತದೆ. ಸ್ಮೃತಿಯೆಂದರೆ ನೆನಪು ಎಂದಿದ್ದರೂ ಅರ್ಥಮಾಡಿಕೊಳ್ಳುವುದು, ಆ ವಿಷಯದಲ್ಲಿ ಸದಾ ಎಚ್ಚರವಿರುವುದು. ಇದಕ್ಕಿಂತ ಮೇಲಿನ ಸ್ಥಿತಿಯೆಂದರೆ ಎಚ್ಚರದಲ್ಲಿದ್ದು ತಿಳಿದುದನ್ನು ಎಂದೆಂದಿಗೂ ಧಾರಣ ಮಾಡಿಕೊಂಡಿರುವುದು ಮೇಧಾ.

ಈ ಮೇಧಾ ಸಾಕ್ಷಾತ್ ಪರಮಾತ್ಮ ಸ್ವರೂಪವು *'ಸ್ಮೃತಿ ಮೇಧಾ ಧೃತಿಕ್ಷಮಾಃ'* – ಸ್ಮೃತಿ, ಮೇಧಾ, ಧೃತಿ ಮತ್ತು ಕ್ಷಮಾ ನಾನಾಗಿದ್ದೇನೆ ಎಂದು ಶ್ರೀಕೃಷ್ಣನ ವಾಕ್ಯವು ಮೇಧಾ ಭಗವತ್ಸ್ವರೂಪವೆಂಬುದನ್ನು ಸ್ಪಷ್ಟಪಡಿಸುತ್ತದೆ. ಇದರಿಂದ ಮೇಧಾ ಶಕ್ತಿ ಇಂತಹ ಉನ್ನತಮಟ್ಟದ್ದಾಗಿರುವುದರಿಂದ ಆ ಶಕ್ತಿಯನ್ನು ಸಾಕ್ಷಾತ್ ದೇವಿ ಎಂದು ಪೂರ್ವದ ಋಷಿ, ಮುನಿ, ಮಂತ್ರದ್ರಷ್ಟಾರರು ವರ್ಣಿಸಿರುವುದು ಕಂಡುಬರುತ್ತದೆ.

ಲಲಿತಾ ಸಹಸ್ರನಾಮದಲ್ಲಿ ಲಲಿತಾದೇವಿಯನ್ನು *'ಸ್ವಾಹಾ ಸ್ವಧಾಮತಿರ್ಮೇಧಾ ಶ್ರುತಿ ಸ್ಮೃತಿರನುತ್ತಮಾ'* ಎಂದು ಹೇಳಿರುವುದರಲ್ಲಿ ದೇವಿಯನ್ನು ಮೇಧಾರೂಪಿಯಾಗಿರುವವಳು ಮತ್ತು 'ಮೇಧೋನಿಷ್ಠಾ' – ಮೇಧಸ್ಸಿನ ಅಭಿಮಾನಿ ದೇವತೆಯೆಂದೂ ಹೇಳಿದೆ. ಅಂತೆಯೇ ದೇವಿಯನ್ನು 'ಹೇ ದೇವಿ, ಅಖಿಲಶಾಸ್ತ್ರಸಾರವನ್ನು ಒಳಗೊಂಡಿರುವ ಮೇಧಾ ಸ್ವರೂಪಗಳು ನೀನಾಗಿದ್ದೀಯಾ – 'ಮೇಧಾಽಸಿ ದೇವಿ ವಿದಿತಾಖಿಲ ಶಾಸ್ತ್ರಸಾರಾ' ಮತ್ತು ಎಲ್ಲ ಪ್ರಾಣಿಗಳಲ್ಲಿಯೂ ಯಾವ ದೇವಿಯು ಮೇಧಾ ರೂಪದಿಂದ ಸ್ಥಿತಳಾಗಿರುವಳೊ – 'ಯಾ ದೇವಿ ಸರ್ವಭೂತೇಷು ಮೇಧಾರೂಪೇಣ ಸಂಸ್ಥಿತಾ' ಎಂದು ದೇವಿ ಮಹಾತ್ಮ್ಯದಲ್ಲಿ ಹೇಳಿದೆ. ಪದ್ಮಪುರಾಣ ಪ್ರಕಾರ 'ಕಾಶ್ಮೀರ ಮಂಡಲದಲ್ಲಿ ದೇವಿಯು ಮೇಧಾ ರೂಪದಲ್ಲಿರುವಳು'. ವಿಷ್ಣು ಸಹಸ್ರನಾಮದಲ್ಲಿ 'ಮೇಧಾವಿನೇ ನಮಃ' – ಜೀವದ ಪ್ರತಿಯೊಂದು ಕ್ಷಣ ಪ್ರೇರಿತಗೊಳಿಸುತ್ತ ಇರುವ ಆತನಿಗೆ ನಮಸ್ಕಾರ' ಎಂದು ನಮಸ್ಕಾರ ಮಾಡುವುದಿದೆ. ಸಾಮವೇದದಲ್ಲಿ 'ಸದಾ ಮೇಧಾವನ್ನೇ ಬೇಡ ಬೇಕು' ಎಂದು ಹೇಳಿದ್ದಿದೆ. ಯಜುರ್ವೇದದಲ್ಲಿ 'ಯಾವ ಮೇಧಾಕ್ಕೋಸ್ಕರ ದೇವತಾಗಣ ಚಿಂತಿಸುತ್ತಿರುತ್ತದೊ, ರಕ್ಷಕರೂ ವಿದ್ವಾಂಸರೂ ಯಾವುದನ್ನು ಇಷ್ಟಪಡುತ್ತಾರೊ, ಆ ಮೇಧಾದಿಂದಲೇ ಅಗ್ನಿಸಮಾನ ಪ್ರಜ್ವಲಿತನಾಗಿ ಬೆಳಗುತ್ತಿರುವ ದೇವನೇ ನಮ್ಮನ್ನು ಮೇಧಾಶಕ್ತಿಯಿರುವವರನ್ನಾಗಿ ಮಾಡು, ಮೇಧಾವಿಯನ್ನಾಗಿ ಮಾಡು – *"ಯಾಂ ಮೇಧಾ ದೇವಗಣಾಃ ಪಿತರಶ್ಚೋಪಾಸತೇ ತಯಾ ಮಾಮದ್ಯ ಮೇಧಯಾಗ್ನೇ ಮೇಧಾವಿನಂ ಕುರು"* (೩.೧೪) ಎಂದು ಪ್ರಾರ್ಥನೆ ಮಾಡಿದ್ದಿದೆ, ಮಾತ್ರವಲ್ಲ ಉಷಾಕಾಲದ ಕಿರಣದಂತಹ, ನಿನ್ನ ಆತ್ಮದಲ್ಲಿಯೂ ಪ್ರಕಾಶದ ಕಿರಣದ ಉದಯವಾಗಲು ಮೇಧಾ ಶಕ್ತಿಯನ್ನು ಬೇಡು ಎಂದು ಹೇಳಿದ್ದಿದೆ. ಮಧ್ಯಾಹ್ನ ಪ್ರಜ್ವಲಿಸುವ ಸೂರ್ಯನಂತೆ ಪ್ರಜ್ವಲಿಸುವ ಮೇಧಾಶಕ್ತಿಯನ್ನು ಬೇಡು, ಸಂಜೆ ಮುಳುಗುವ ಸೂರ್ಯಸದೃಶ ಕಾಂತಿಯುಕ್ತ ಮೇಧಾ ಬೇಡು ಎಂದು ಋಗ್ವೇದದ ನುಡಿಗಳಿವೆ.

ಈ ಮೇಧಾಶಕ್ತಿಯ ಮಹತ್ವವನ್ನರಿತೇ ಹೇಳದ್ದಿದೆ – ಎಂದೆಂದಿಗೂ ನಾಶವಾಗದೆ ಇರುವ, ನಮ್ಮನ್ನು ಸದಾ ಮುನ್ನಡೆಸುವಂತಹದ್ದನ್ನು ದೇವರ ಹತ್ತಿರ ಬೇಡಬೇಕು. ಅದು ಯಾವುದೆಂದರೆ ಮೇಧಾ ಶಕ್ತಿ; ಇದನ್ನೇ ಎಂದೆಂದೂ ಬೇಡಬೇಕು. ಹೀಗಾಗಿಯೇ ಅಗ್ನಿಯ ಹತ್ತಿರ ಬೇಡುವುದು, 'ಎಲೈ ಹವ್ಯವಾಹನ ನನಗೆ ಮೇಧಾ ನೀಡು, ನೀಡು, ನೀಡು' ಎಂದು.

(ವಿವಿಧ ಮೂಲಗಳಿಂದ) ★





# ಶ್ರಮ ಸಂಸ್ಕೃತಿ : ಒಂದು ವಿವೇಚನೆ

– ಈರಯ್ಯ ಕಿಲ್ಲೇದಾರ
'ಈನಿಂಕಿ', ಕವಿತಾ ಪ್ರಕಾಶನ ಗುಡಿಕಟ್ಟಿ
ಅಂಚೆ – ೫೯೧೧೦೪,
ಬೆಳಗಾವಿ ಜಿಲ್ಲೆ.

೧೨ನೇ ಶತಮಾನವು ಇದು ಶ್ರಮಕ್ಕೆ ಪ್ರಾಧಾನ್ಯತೆ ಕೊಟ್ಟ ಮಹತ್ವದ ಘಟ್ಟ, ಶ್ರಮ ಸಂಸ್ಕೃತಿಯನ್ನು ರೂಪಿಸಿದ ಗೌರವಿಸಿದ ಯುಗ. ದುಡಿಯದೇ ಕಷ್ಟ ಪಡದೆ, ಅನ್ಯರ ಶ್ರಮದ ಮೇಲೆ ಅವಲಂಬಿತರಾಗುವುದನ್ನು ಶರಣರು ಒಪ್ಪುವುದಿಲ್ಲ. ಪ್ರತಿಯೊಬ್ಬರು ಕಾಯಕ ಮಾಡಿಯೇ ಜೀವನ ನಡೆಸಬೇಕು ಎಂಬುದು ಶರಣರ ಸಿದ್ಧಾಂತವಾಗಿತ್ತು. ಪ್ರತಿಯೊಬ್ಬರೂ ಒಂದಲ್ಲ ಒಂದು ಕಾಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅವನು ತನ್ನ ದುಡಿಮೆಯ ಪ್ರತಿಫಲದಿಂದ ಬದುಕಿದ್ದಾನೆ. ಅವನು ತನ್ನ ಅವಶ್ಯಕತೆಗೆ ಬೇಕಾದಷ್ಟನ್ನು ಪಡೆದು ಉಳಿದದ್ದನ್ನು ನಾಳೆಗೆ ಬೇಕು, ಮಕ್ಕಳಿಗೆ ಬೇಕು ಎಂದು ಸಂಗ್ರಹಿಸಿಡಲಾರ. ಅಂತೆಯೇ ಅವನ ಬದುಕು ಶ್ರೇಷ್ಠವಾದದ್ದು. ಶ್ರಮ ಸಂಸ್ಕೃತಿಯಲ್ಲಿ ಎಲ್ಲವೂ ತಾನೇ ಮಾಡಿದ್ದು, ತಾನೇ ದುಡಿದು ಗಳಿಸಿದ್ದು ದುಡಿತದ ಫಲವೆಲ್ಲ ತನಗಾಗಿ, ತನ್ನ ಮಕ್ಕಳಿಗಾಗಿ ಎಂಬ ಸ್ವಾರ್ಥವೂ ಇಲ್ಲ. ಅಹಂಕಾರದ ಅತಿರೇಕವೂ ಇಲ್ಲ. ಬದಲಾಗಿ ಮಾಡುವವ ತಾನಲ್ಲ, ದುಡಿಯುವವ ತಾನಲ್ಲ. ದುಡಿತದ ಫಲವೆಲ್ಲ ತನಗೊಬ್ಬನಿಗೆ ಅಲ್ಲ. ತಾನುಂಡು ಉಳಿದದ್ದೆಲ್ಲ ಸಮಾಜಕ್ಕೆ ಎಂಬ ಮನೋಭಾವ ಅವರದಾಗಿತ್ತು.

ದುರಾಸೆ ಇರದ, ಆಶಾರಹಿತವೂ ಆದ ಸ್ಥಿತಿಯಲ್ಲ. ಇವೆರಡನ್ನೂ ಮೀರಿದ ದಾಸೋಹ ತತ್ವ ಕಾಯಕದ ಫಲವಾಗಿದೆ ಮತ್ತು ಪರಿಣಾಮವೂ ಆಗಿದೆ. ಪ್ರಜಾಪ್ರಭುತ್ವವನ್ನು ಮತ್ತು ಸಮಾನತೆಯನ್ನು ಶ್ರಮಸಂಸ್ಕೃತಿ ಪ್ರತಿಪಾದಿಸುತ್ತದೆ. ವೃತ್ತಿನಿರತ ವ್ಯಕ್ತಿ ಆರೋಗ್ಯದಿಂದ ಬದುಕಬಲ್ಲ. ಸಮಾಜದ ಆರೋಗ್ಯಕ್ಕೂ ಕಾರಣ ಆಗುತ್ತಾನೆ. ಅಸಮಾನತೆ ಅಳಿಸಿ ಹಾಕಲು ಅವನಿಗೆ ಸಾಮರ್ಥ್ಯ ಬರುತ್ತದೆ. ಅಂತಹ ನೈತಿಕ ಬಲವನ್ನು, ಶ್ರಮ ಸಂಸ್ಕೃತಿ ನೀಡುತ್ತದೆ. ಶರಣ ಸಮೂಹದಲ್ಲಿ ಶರಣರ ಸಂಗದಲ್ಲಿದ್ದ ಹಲವಾರು ವೃತ್ತಿಗಳನ್ನನುಸರಿಸಿದ ವ್ಯಕ್ತಿಗಳೆಲ್ಲ ಗೌರವ ಪಡೆದರು. ಶರಣರೆಂಬ ಶ್ರೇಷ್ಠ ವ್ಯಕ್ತಿಗಳೆನಿಸಿದರು. ಕಾಯಕದ ಪರಿಕಲ್ಪನೆಯು ವರ್ಣಶ್ರೇಣೀಕರಣವನ್ನೂ ಅಲ್ಲಗಳೆದು, ಶರಣರು ಯಾವುದೇ ಕೋಮಿಗೆ ಸೇರದೆ, ವಿಶ್ವ ಮಾನವರೆನಿಸಿದ್ದು ಅಭಿಮಾನದ ಸಂಗತಿಯಾಗಿದೆ.

ಶರಣರು ಕಾಯಕದ ಮೂಲಕ ಸಮಕಾಲೀನ ಬದುಕಿಗೆ ಸ್ಪಂದಿಸಿದರು. ಅವರು ಶ್ರಮಜೀವಿಗಳಾಗಿದ್ದರಿಂದ ಸುಖ-ದುಃಖಗಳು ಅನುಭವಕ್ಕೆ ಬಂದವು. ಹುಸಿ ಆದರ್ಶಗಳನ್ನು ಬಿಂಬಿಸುವ ಬದಲು, ನಿಜ ಜೀವನದಲ್ಲಿ ಅಳವಡಿಸಿಕೊಂಡರು. ಅವರು ಬಹಿರಂಗದ ಲೋಕದಲ್ಲಿ, ಅಥವಾ ಅಂತರಂಗದ ಗವಿಯಲ್ಲಿ ದೈವವನ್ನು ಶರಣರು ಹುಡುಕಲಿಲ್ಲ. ಇವೆರಡರ ನಡುವಿನ ಬದುಕಿನಲ್ಲಿ, ಕಾಯಕದ ಮೂಲಕ ದೈವವನ್ನು ಕಂಡರು. ಬದುಕು ಹಾಗೂ ಆಲೋಚನೆಗಳ ನಡುವೆ ಸಾಮರಸ್ಯ ಏರ್ಪಟ್ಟಿದ್ದು ಇದೇ ಮೊದಲು, ಶರಣರು ತಮ್ಮನ್ನು ತಾವೇ ಪ್ರಮಾಣೀಕರಿಸಿಕೊಳ್ಳುವ ಪ್ರಾಮಾಣಿಕತೆಯನ್ನು ಒರೆಗೆ ಹಚ್ಚಿ ನೋಡುವ ತನ್ನತನದ ಹುಡುಕಾಟದಲ್ಲೇ ಜೀವನದ ಅರ್ಥವನ್ನು ಕಂಡುಕೊಳ್ಳಲು ಕಾಯಕ ಪ್ರೇರಣೆ ನೀಡಿತು.

ಶರಣರ ಕಾಯಕ ತತ್ವ ವಿಶ್ವದ ಇತಿಹಾಸಲ್ಲಿ ಸಾರ್ವಕಾಲಿಕ ಮೌಲ್ಯ ಉಳ್ಳದ್ದಾಗಿದೆ. ದೈಹಿಕ ಕ್ರಿಯೆಯ ಮೂಲಕ ನೈತಿಕ ನೆಲೆಗೆ, ನೈತಿಕ ನೆಲೆಯಿಂದ ತಾತ್ವಿಕ ನೆಲೆಗೆ, ತಾತ್ವಿಕ ನೆಲೆಯಿಂದ ಆಧ್ಯಾತ್ಮಿಕ ನೆಲೆಗೆ ತಲುಪಿಸುವ ಹಂತವೇ ಕಾಯಕ. ಈ ಕಾಯಕವೆ ಕೈಲಾಸದ ಅಂತರಂಗ. ಶರಣರ ಚಿಂತನಾಕ್ರಮವು ವೈಶಿಷ್ಟ್ಯಪೂರ್ಣವಾದದ್ದು. ಇಲ್ಲಿ ಬೌದ್ಧಿಕ ಕಸರತ್ತಿನ ವಿದ್ವತ್ ಪ್ರತಿಭೆಗಿಂತ ಭಿನ್ನವಾದ ದೈಹಿಕ ಶ್ರಮದ ಪ್ರತಿಭೆ ಎದ್ದು ಕಾಣುತ್ತದೆ. ಕಾಳಿನ ಬಣ್ಣ, ಗಾತ್ರ, ರುಚಿ ಮತ್ತು ಬೆಳೆಯ ಇಳುವರಿಗಳ ಮೇಲೆ ಹೇಗೆ ಮಣ್ಣು ಪ್ರಭಾವ ಬೀರುತ್ತದೆಯೋ ಅದರಂತೆ ಕಲ್ಯಾಣದ ಅನುಭವ ಮಂಟಪವು ಶರಣರ ಮೇಲೆ ನೈತಿಕ ಮತ್ತು ಆಧ್ಯಾತ್ಮಿಕ ಪ್ರಭಾವ ಬೀರಿತು. ಭೌತಿಕ (ಪದಾರ್ಥ)ವಾದ ಶರೀರವು ಪ್ರಸಾದಕಾಯ ಎನಿಸಿತು. ಪ್ರತಿಯೊಬ್ಬನ ವೃತ್ತಿಯೂ ಶ್ರೇಷ್ಠವಾಗಿತ್ತು ಎನಿಸಿ ಕಾಯಕದ ಘನತೆ ಪಡೆದವು. ಕಾಯಕವೇ ಶರಣರ ನಿಜವಾದ ಆಧ್ಯಾತ್ಮವಾಗಿತ್ತು. ಎಲ್ಲ ಕಾಯಕಗಳು ಪವಿತ್ರವಾದವು; ಮನುಷ್ಯ ಬದುಕಲು ಒಂದಿಲ್ಲಾ ಒಂದು ಉದ್ಯೋಗವನ್ನು ಅವಲಂಬಿಸಬೇಕಾಗುತ್ತದೆ. ಈ ಉದ್ಯೋಗಕ್ಕೆ ಆಧ್ಯಾತ್ಮಿಕ ಹಿನ್ನೆಲೆ ದೊರೆತಾಗ ಪವಿತ್ರವೂ ಗೌರವಯುತವೂ ಆಗುತ್ತದೆ. ಇಲ್ಲದಿದ್ದರೆ ಅದು ಕಾಟಾಚಾರದ ಕೆಲಸ ಎನಿಸುತ್ತದೆ. ತನ್ನ ವೃತ್ತಿಯಲ್ಲಿ ದೈವ ನಿಯಮವನ್ನು ಮತ್ತು ಪಾವಿತ್ರ್ಯತೆಯನ್ನು ಕಾಣಬೇಕು. ಅದು ಸ್ವಾರ್ಥವನ್ನು ಬಿಟ್ಟು ಪರಹಿತಕ್ಕಾಗಿ ಮಾಡುತ್ತಿರುವುದು ಎಂಬ ಭಾವನೆ ಮೂಡಿದಾಗ ಸಾಧ್ಯವಾಗುತ್ತದೆ. ಇದಕ್ಕಿಂತಲೂ ಎತ್ತರದಲ್ಲಿ ಕಾಯಕತತ್ವ ಹೆಚ್ಚು ಮಹತ್ವಪೂರ್ಣ ಎನಿಸಿದೆ.

ಕೆಲಸ ಮಾಡುವಾಗ ಮಾನಸಿಕ ಒತ್ತಡವಾಗಲಿ, ಇದಕ್ಕಾಗೇ ತಾನು ದುಡಿಯಬೇಕಾಯಿತಲ್ಲಾ ಎಂಬ ಭಾವನೆ ಇರಬಾರದು. ಕೆಲಸದಿಂದಾಗುವ ಶರೀರದ ಆಯಾಸ, ಬಳಲಿಕೆ ಬೇಸರವಾಗಲಿ ವ್ಯಕ್ತಪಡಿಸಬಾರದು. ಬದಲಾಗಿ ಮಾಡಿದ ಕೆಲಸದ ಬಗ್ಗೆ ತೃಪ್ತಿಯನ್ನು ಪ್ರೀತಿಯನ್ನು ವ್ಯಕ್ತಪಡಿಸಬೇಕು. ಮಾಡುವ ಕೆಲಸವನ್ನು ಗೌರವದ ಕೆಲಸ ಎಂದು ಭಾವಿಸಬೇಕು. ಆಗ ಮಾಡುವ ಕೆಲಸಕ್ಕೆ ಘನತೆ ದೊರಕಿ ಯಾವುದೇ ಕೆಲಸವಿರಲಿ ಅದು ಪವಿತ್ರ ಕಾಯಕ ಎನಿಸುತ್ತದೆ. ತಾನು ದುಡಿಯುವುದು ಕೇವಲ ಹೊಟ್ಟೆ ಬಟ್ಟೆಗೆ ಅಲ್ಲ, ಆಧ್ಯಾತ್ಮಿಕ ಸಾಧನೆಗೆ ತೊಡಗಿಸಿಕೊಳ್ಳುವ ಸಂಕಲ್ಪ ಹಾಗೂ ಬದ್ಧತೆ ಇದೆ.

### ಕಾಯಕ ಮತ್ತು ದಾಸೋಹ

'ದುಡಿತವೆ ದುಡ್ಡಿನ ತಾಯಿ' ಎಂದು ಮಹಾತ್ಮರು ಹೇಳಿದ್ದಾರೆ. ಮನುಷ್ಯನಿಗೆ ಅನ್ನ, ನೀರು, ಗಾಳಿ ಮತ್ತು ಆಶ್ರಯ ಅವಶ್ಯಕವಿರುವಂತೆ ದುಡಿಮೆಯೂ ಅವಶ್ಯಕ ಎನಿಸಿದೆ. ಆರ್ಥಿಕ ಸಮಸ್ಯೆಯನ್ನು ಪರಿಹರಿಸಲು ಎಷ್ಟೋ ಕ್ರಾಂತಿಕಾರಿ ವ್ಯಕ್ತಿಗಳು ಪಟ್ಟಶ್ರಮ ಸಾರ್ಥಕವಾಗಿದೆಯಾದರೂ ಆರ್ಥಿಕ ಅಸಮಾನತೆ ಸುಲಭದಲ್ಲಿ ನಿವಾರಣೆಯಾಗುವಂತಹುದಲ್ಲ. ೧೨ನೆಯ ಶತಮಾನದಲ್ಲಿ ಶರಣರು ಆರ್ಥಿಕ ಅಸಮಾನತೆ ಅಳಿಸಿ ಹಾಕಲು ಕಾಯಕ ತತ್ತ್ವ ರೂಪಿಸಿದರು. ಇತಿಹಾಸವನ್ನು ಅವಲೋಕಿಸಿದರೆ ಮೊಟ್ಟಮೊದಲು ಶ್ರಮ ಸಂಸ್ಕೃತಿಯನ್ನು ಗೌರಿಸಿದವರು ಶರಣರು. ಆರ್ಥಿಕ ಅಸಮಾನತೆಗೆ ಅಸ್ತಿಭಾರ ಹಾಕಿದವರು ಶರಣರೇ ಮೊದಲಿಗರು. ವಿಧವಿಧದ ಹೂವುಗಳ ಮಕರಂದ ಹೀರಿ ಬರುವ ಜೇನು ನೊಣಗಳು ಗೂಡಿನಲ್ಲಿ ತಮ್ಮ ಪಾಲಿನ ಶ್ರಮದ ಮೂಲಕ ತುಪ್ಪವನ್ನು ಸಂಗ್ರಹಿಸಿ ಅದನ್ನು ಲೋಕದ ಜನರಿಗೆ ಕಾದಿಡುತ್ತದೆ. ಅದರಂತೆ ವಿಧವಿಧದ ವೃತ್ತಿಯನ್ನು ಅನುಸರಿಸಿದ ಜನರೆಲ್ಲ ಕಾಯಕ ತತ್ತ್ವದ ಮೂಲಕ ಸಂಘಟಿತರಾಗಿ ದುಡಿಮೆಯ ಮೂಲಕ ಬಂದ ಪ್ರತಿಫಲವನ್ನು ತಾನುಂಡು ಉಳಿದದ್ದನ್ನು ಲೋಕಕಲ್ಯಾಣಕ್ಕೆ ವಿನಿಯೋಗಿಸಿದರು. ಕಾಯಕ ಮತ್ತು ದಾಸೋಹಗಳು ಸಾಮಾಜಿಕ ಮೌಲ್ಯಗಳೆನಿಸಿವೆ.

ಕರ್ಮವಾದ ಎನ್ನುವುದು ಬಸವಪೂರ್ವ ಯುಗದಲ್ಲಿ ಪ್ರಚಲಿತದಲ್ಲಿತ್ತು. ಕರ್ಮವಾದದ ಪ್ರಕಾರ ಏನೆಲ್ಲಾ ಕೆಡುಕುಗಳು – ಒಳಿತುಗಳು, ಜಯ-ಅಪಜಯ, ಶುಭ-ಅಶುಭ, ಸಿರಿತನ-ಬಡತನಗಳು, ಶುಭಶಕುನ-ಅಪಶಕುನಗಳೆಲ್ಲ ಹಿಂದಿನ ಜನ್ಮದ ಪಾಪ-ಪುಣ್ಯಗಳ ಫಲಗಳು' ಹಿಂದೆ 'ಸರ್ವೇಜನಾಃ ಸುಖಿನೋಭವಂತು' ಎಂದು ನುಡಿಯಲ್ಲಿ ಹೇಳಿದರೆ ಹೊರತು ಆಚರಣೆಗೆ ತರಲಿಲ್ಲ. ಕಾಯಕ ಕೇವಲ ಜೀವನೋಪಾಯಕ್ಕಾಗಿ ಮಾಡುವ ವೃತ್ತಿಯಲ್ಲ. ದುಡಿಮೆಯಲ್ಲಿ ದೇವರನ್ನು ಕಾಣುವ ಸಾಧನ. ಕಾಯಕ ತತ್ತ್ವದ ಪ್ರಕಾರ ಯಾವುದಕ್ಕೂ ಮುಂದಿನ ಜನ್ಮಕ್ಕಾಗಿ ಕಾಯಬೇಕಾಗಿಲ್ಲ. ಈಗ ಮಾಡಿದ್ದುದರ ಫಲವನ್ನು ಈಗಲೇ ಇದೇ ಜನ್ಮದಲ್ಲಿ ಉಣ್ಣಬೇಕು. ನಮ್ಮ ದುಡಿಮೆ ಎಂತಹುದೋ ಫಲವೂ ಅಂತಹುದೇ ಆಗಿದೆ. ದುಡಿಮೆಗೆ ತಕ್ಕಷ್ಟೇ ಪ್ರತಿಫಲ ಪಡೆಯಬೇಕು.

ಜನರನ್ನು ಕಾಡಿ ಬೇಡಿ, ಜನರ ಮನಸ್ಸನ್ನು ನೋಯಿಸಿ, ತನುಮನ ಬಳಲದೆ ಗಳಿಸಿದ ಹಣ ಒಳ್ಳೆಯ ಕಾರ್ಯಕ್ಕೆ ಉಪಯೋಗವಾಗದು. ಅದು ಪ್ರಾಯಶ್ಚಿತ್ತಕ್ಕೆ ಸಲ್ಲುವುದು. ಹಣ ಸ್ಥಾವರ ಆಗಬಾರದು. ಅದು ಜಂಗಮ ಆಗಬೇಕು. ಕೆಲವರು ಮಾತ್ರ ಶ್ರೀಮಂತಿಕೆಯಿಂದ ಮೆರೆಯುವುದು ಅಪಾಯಕಾರಿ, ಅದಕ್ಕೆಂದೇ ಕಾಯಕದ ಜೊತೆಗೆ ದಾಸೋಹ ತತ್ತ್ವವನ್ನು ಆಚರಣೆಯಲ್ಲಿ ತಂದಿದ್ದಾರೆ. ಕಾಯಕ ಮಾಡದೇ ಇದ್ದರೆ ಮನುಷ್ಯ ಸೋಮಾರಿಯಾಗುತ್ತಾನೆ. ಕಾಯಕ ಮಾಡಿದರೆ ಅದಕ್ಕೆ ತಕ್ಕಷ್ಟು ಮಾತ್ರ ಪ್ರತಿಫಲ ಪಡೆಯಬೇಕು. ಪಡೆದದ್ದನ್ನು ಉಣ್ಣಲು, ಉಡಲು ಉಪಯೋಗಿಸಬೇಕು. ಉಣ್ಣುವೆನೆಂದು ಅತಿಯಾಗಿ ಉಣ್ಣುವುದಲ್ಲ, ಬದುಕುವ ಸಲುವಾಗಿ ಉಣ್ಣಬೇಕು. ಅದಕ್ಕೆಂದೇ 'ಉಂಡುಪವಾಸಿ' ತತ್ತ್ವವನ್ನು ಬಸವಣ್ಣನವರು ಬಳಕೆಯಲ್ಲಿ ತಂದರು. ಉಂಡು ಉಣ್ಣದಂತೆ, ಬದುಕಲು ಎಷ್ಟು ಬೇಕೋ ಅಷ್ಟನ್ನೇ ಉಂಡು ನಾಳೆಗೆಂದು ಸಂಗ್ರಹಿಸಿಡದೆ ಉಳಿದಿದ್ದನ್ನು ಸಮಾಜಕ್ಕೆ ವಿನಿಯೋಗಿಸಬೇಕು. ಉಪವಾಸವಿದ್ದು ಹಣಗಳಿಸುವದಾಗಲಿ ಜಿಪುಣತನದಿಂದ ಬದುಕುವುದಾಗಲಿ ಸರಿಯಲ್ಲ.

ಯಾವುದೇ ಕಾಯಕ ಇರಲಿ, 'ಕೃಷಿ ಕಾಯಕದಿಂದಾರೇನು ತನುಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದ ತೋರಯ್ಯಾ' ಎಂದಿದ್ದಾರೆ ಬಸವಣ್ಣನವರು. ಅಂಥ ಸದ್ಭಕ್ತನ ನಡೆ ಶುದ್ಧ ನುಡಿ ಶುದ್ಧ 'ಅಂಥ ಸದ್ಭಕ್ತನ ಮನೆ ಕೈಲಾಸ' ಎಂದು ಮತ್ತೊಂದು ವಚನದಲ್ಲಿ ಬೆವರು ಸುರಿಸಿ ದುಡಿದು, ಗಳಿಸಿ, ಬಳಸಿ, ಉಳಿದದ್ದು ದಾಸೋಹಕ್ಕೆ ಅರ್ಪಿಸುವವನು. ದೇವರ ನಂಬುಗೆಗೆ ಪಾತ್ರನಾಗುತ್ತಾನೆ. ಅಂತಹ ಭಕ್ತನಿರುವ ಮನೆಯೇ ಕೈಲಾಸ ಎಂದಿದ್ದಾರೆ. ಹಣ ಗಳಿಕೆಯೇ ಇಂದಿನವರ ಗುರಿಯಾಗಿ ಅಸಮಾನತೆ ಹೆಚ್ಚಲು ಕಾರಣವಾಗಿದೆ. ಆದರೆ ಶರಣರು ಹಣ ಗಳಿಕೆ ಹಾಗೂ ವಿನಿಯೋಗಕ್ಕೆ ನೈತಿಕ ಹೊಣೆಗಾರಿಕೆಯನ್ನೂ ವಹಿಸಿದ್ದಾರೆ. ಆದರಿಂದ ಆರ್ಥಿಕ ಅಸಮಾನತೆ ನೀಗಲು ಸಾಧ್ಯ. ಯಾರೂ ಸಂನ್ಯಾಸಿಯಾಗಬೇಕಿಲ್ಲ. ಸಂಸಾರದಲ್ಲಿದ್ದುಕೊಂಡೆ ಸಂನ್ಯಾಸಿಯಾಗಲು ಸಾಧ್ಯವಿದೆ. ಸದಾಚಾರದಿಂದ, ಸತ್ಕಾರ್ಯದಿಂದ, ಸಕಲ ಜೀವಾತ್ಮರ ಲೇಸ ಬಯಸುವ ಜೀವನ ನಮ್ಮದಾಗಬೇಕಿದೆ.

ದಾಸೋಹದಲ್ಲಿ ನಾ ಮಾಡಿದೆನೆಂಬ ಅಹಂಕಾರ ಇರದು. ದಾನದಲ್ಲಿ ನಾ ನೀಡಿದೆ ನಾ ಮಾಡಿದೆ ಎಂಬ ಭಾವ ಇರುತ್ತದೆ. ಅಷ್ಟೇ ಅಲ್ಲ ದಾನ ನೀಡಿದವರು ಶಾಸನಗಳಲ್ಲಿ ತಮ್ಮ ಹೆಸರನ್ನು ಕೆತ್ತಿಸಿಟ್ಟಿದ್ದಾರೆ. ದಾಸೋಹ ಹಾಗೆ ಅಲ್ಲ. ನನ್ನದೆಂಬುದು ಯಾವುದೂ ಇಲ್ಲ, ನಾ ನೀಡುವುದು ಕೊಡುವುದು ಏನೂ ಇಲ್ಲ, ದಾಸೋಹಗ್ಗೆದೆನೆಂಬುದು ಮನದಲ್ಲಿ ಹೊಳೆಯಬಾರದು. ಹೀಗೆ ದಾಸೋಹವು ದಾನಕ್ಕಿಂತ ಉನ್ನತ ಮೌಲ್ಯ ಎನಿಸಿದೆ. ★





## ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು
ಪ್ರಾಧ್ಯಾಪಕರು,
ಶ್ರೀ ಸಿದ್ದಗಂಗಾ ಸಂಸ್ಕೃತ ಕಾಲೇಜು,
ಶ್ರೀ ಸಿದ್ದಗಂಗಾ ಕ್ಷೇತ್ರ

ಭಾಗ-೯

ನಿಗಮಾಗಮದುರ್ಲಭರಾದ ಗುರುಸಿದ್ದಲಿಂಗೇಶ್ವರರು ಗಾಳಿಪೂಜಾ ಪರ್ವತದಿಂದ ಹೊರಟು ಮೂಡಣದೇಶವನ್ನು ಸಂಚರಿಸುತ್ತಾ ತಪೋಯೋಗ್ಯ ಭೂಮಿಯಾದ ಕಗ್ಗೆರೆಗೆ ದಯಮಾಡಿಸುತ್ತಾರೆ. ಆ ಕೆಗ್ಗೆರೆಪುರವಾದರೋ ಕೆರೆಕಟ್ಟೆ ಕಾಲುವೆಗಳಿಂದಲೂ ಹೊಲಗದ್ದೆ ತೋಟ ತುಡಿಕೆಗಳಿಂದಲೂ ಶಿವಭಕ್ತರ ಮನೆಮಠಗಳಿಂದಲೂ ಪರಿಶೋಭಿಸುತ್ತಿತ್ತು. ಆ ಪೊಳಲೊಳಗೆ ಸಕಲಶಾಸ್ತ್ರಾಗಮ ವಿಚಾರಕೋವಿದನೂ ಉಜ್ವಲಲಿಂಗ ನಿಷ್ಠಾಪರನೂ ಸದ್ಧರ್ಮತತ್ಪರನೂ ಗುರುಲಿಂಗ ಜಂಗಮ ಪ್ರೇಮಿಯೂ ಆದ ನಂಬ್ಯಣ್ಣಶೆಟ್ಟಿಯೆಂಬ ಶಿಭಕ್ತನಾದ ಹರದನಿದ್ದನು. ಆ ನಂಬ್ಯಣ್ಣಶೆಟ್ಟಿಗೆ ಆ ಊರಹೊರಗೆ ತೆಂಕಣ ದಿಕ್ಕಿನ ನಾಗಿಣಿ ನದಿಯ ದಡದಲ್ಲಿ ಬಂದು ಬೀಡುಬಿಟ್ಟದ್ದ ಪರಾತ್ಪರ ಗುರುಮೂರ್ತಿಯ ಆಗಮನದ ವಾರ್ತೆ ಗೊತ್ತಾದುದೇ ತಡ ತಕ್ಷಣ ಸಕಲ ಸದ್ಭಕ್ತ ಕುಲದೊಡನೆ ಬಂದು ಭೃತ್ಯಾಚಾರದ ಭಕ್ತನಾಗಿ ಶ್ರೀ ಗುರುಮೂರ್ತಿಯನ್ನು ತನ್ನ ಗೃಹಕ್ಕೆ ಬಿಜಯಂಗೈಸುತ್ತಾನೆ. ಆ ಭಕ್ತನ ಭಕ್ತಿಯನ್ನು ಅನುದಿನವೂ ಕೈಗೊಳ್ಳುತ್ತಾ ಕೆಲವು ದಿನಗಳ ಕಾಲ ಅಲ್ಲಿಯೇ ಇರುತ್ತಾರೆ. ಹೀಗಿರುವಾಗ ಒಂದು ದನ ಗೌಡನಾದ ಗಿರಿಯಣ್ಣ, ಭಕ್ತನಾದ ನಂಬ್ಯಣ್ಣ ಹಾಗೂ ಇತರ ಪ್ರಮುಖ ಭಕ್ತ ಜನರೊಡಗೂಡಿ ಆಟನೆಮಾಡುತ್ತಾ ಊರಹೊರಗಿರುವ ಸುಂದರ ವಾದ ವನಸ್ಥಳಕ್ಕೆ ದಯಮಾಡಿಸುತ್ತಾರೆ. ಆಲಬೇಲ ಬೇವು ಮಾವು ತೆಂಗು ಕಾಂಗು ಹೊಂಗೆ ಹಿಪ್ಪೆ ನೇರಳೆ ಹಲಸು ಮುಂತಾದ ಮರಗಳಿಂದಿಡಿಕಿರಿದ ಆ ವನದ ಮಧ್ಯದಲ್ಲಿರುವ ಮಾಮರದ ಕೆಳಗೆ ಬಂದು ಕುಳಿತುಕೊಳ್ಳುತ್ತಾರೆ. ಆಗೊಂದು ಘಟನೆ ಸಂಭವಿಸುತ್ತದೆ. ಭಾವ್ಯಾರ್ಥ ಚಿಂತಕರಾದ ಶಿವಯೋಗಿಗಳು ಕ್ಷಣಕಾಲ ಕಣ್ಮುಚ್ಚಿ ತೆರೆದು ಗಿರಿನಾಥನಿಗೆ ಹೇಳುತ್ತಾರೆ. "ಎಲೈ ಗೌಡನೆ! ಈ ಕ್ಷಣವೇ ನೀನು ಕಗ್ಗೆರೆಗೆ ಹೋಗು ಇನ್ನೊಂದು ಘಳಿಗೆಯಲ್ಲಿ ಆರಣೆಯ ಕೆಂಚ, ದೊಡ್ಡನೆಂಬ ಬೇಡರು ಬಂದು ಊರಿಗೆ ಮುತ್ತಿಗೆ ಹಾಕಿ ಸೂರೆಮಾಡುತ್ತಾರೆ. ಊರನ್ನು ರಕ್ಷಿಸು ಹೋಗು" ಎಂಬುದಾಗಿ ಶಿವಯೋಗಿಯ ಮಾತೆಂದೂ ಸುಳ್ಳಾಗದೆಂದು ನಂಬಿದ್ದ ಗಿರಿಯಣ್ಣಗೌಡ ಹಾಗೂ ಭಕ್ತರೆಲ್ಲರೂ ಕೂಡಲೇ ಊರಿನತ್ತ ದೌಡಾಯಿಸುತ್ತಾರೆ. ಆದರೆ ಅಷ್ಟರೊಳಗಾಗಿ ಆ ಶಬರರು ಶರವೇಗದಲ್ಲಿ ಬಂದು ಊರನ್ನೆಲ್ಲಾ ಕೊಳ್ಳೆ ಹೊಡೆದುಕೊಂಡು ಹೋಗುತ್ತಾರೆ. ಆಗ ಅವಣಿಜರೆಲ್ಲರೂ ತಮ್ಮ ತಮ್ಮ ಹೆಂಡತಿ ಮಕ್ಕಳು ಮರಿಗಳೊಡನೆ ಊರುಬಿಟ್ಟು ಹೊರಟು ಬೇರೊಂದು ಪಟ್ಟಣಕ್ಕೆ ಹೋಗಿ ವ್ಯಾಪಾರ ವ್ಯವಹಾರ ಮಾಡಿಕೊಂಡು ಸುಖವಾಗಿರುತ್ತಾರೆ. ಹೀಗೆ ಊರುಬಿಟ್ಟು ಹೋಗುವಾಗ್ಗೆ ಭಕ್ತನಂಬ್ಯಣಶೆಟ್ಟಿ ಶಿವಯೋಗಿಗಳ ಸನಿಹಕ್ಕೆ ಬಂದು "ಮಹಾಲಿಂಗವೇ! ಮತ್ತೆ ಶಬರರು ಧಾಳಿಯಿಡಬಹುದು, ಕೃಪೆಮಾಡಿ ನಮ್ಮೊಡನೆ ಬಿಜಯಂಗೈರಿ, ನಮ್ಮ ಮನೆಯಲ್ಲಿಯೇ ಅರ್ಚನೆ ಅರ್ಪಿತಕ್ಕೆ ವ್ಯವಸ್ಥೆಮಾಡಿತ್ತೇವೆ" ಎಂದು ಬೇಡುತ್ತಾನೆ. ಆಗ ಸಿದ್ದಲಿಂಗೇಶ್ವರರು "ನಾವಿಲ್ಲಿಂದ ಏಳಲಾಗದು, ಇಲ್ಲಿಯೇ ಶಿವಯೋಗದಲ್ಲಿ ನಿಲ್ಲುತ್ತೇವೆ" ಎಂದು ಆತನ ವಿಜ್ಞಾಪನೆಯನ್ನು ತಿರಸ್ಕರಿಸುತ್ತಾರೆ. ಅದರಂತೆ ಆರು ತಿಂಗಳುಗಳ ಕಾಲ ಆಕಗ್ಗೆರೆಯ ವನದಲ್ಲಿ ಶಿವಯೋಗದಲ್ಲಿರುತ್ತಾರೆ. ಅದರ ವರ್ಣನೆಯು ಸು. ೪೫ ಪದ್ಯಗಳಲ್ಲಿ ದೀರ್ಘವಾಗಿ ಬಂದಿದೆ. ಅದನ್ನು ಪ್ರತ್ಯೇಕವಾಗಿ ಭಾಗವಾಗಿ ಕೊಡಲಾಗುವುದು.

ಹೀಗೆ ಸಿದ್ದಲಿಂಗೇಶ್ವರರು ತನುಮನ ಪ್ರಾಣೇಂದ್ರಿಯಗಳನ್ನು ಲಿಂಗದಲ್ಲಿ ನಿಲ್ಲಿಸಿ ಆರು ತಿಂಗಳ ಕಾಲ ಶಿವಯೋಗ ಸಮಾಧಿಯಲ್ಲಿರಲಾಗಿ ಗದ್ದುಗೆಯ ಸುತ್ತಲೂ ಗೊದಲೆಗಳು (ಗೆದ್ದಲ ಹುಳುಗಳು) ಗುಡಿ ಗೋಪುರದಾಕೃತಿಯಲ್ಲಿ ಹುತ್ತ ಕಟ್ಟಿದವು. ಆ ಹುತ್ತದ ಕೋವೆಯಲ್ಲಿ ಹಾವುಗಳು ಎಡೆಮಾಡಿಕೊಡುತ್ತಿದ್ದವು. ಶಿವಯೋಗಿಯ ಗಡ್ಡದಲ್ಲಿ ಕಡಜಗಳು ಗೂಡಿಕಟ್ಟಿಕೊಂಡು ಹಾರಾಡುತ್ತಿದ್ದವು. ಜಟೆಯಲ್ಲಿ ಮೊಲಗಳು ಮರಿಗಳನ್ನಿಟ್ಟು ಸುಖವಾಗಿ ಓಡಾಡುತ್ತಿದ್ದವು.

ಇತ್ತ ಕಗ್ಗೆರೆಯನ್ನು ತೊರೆದುಹೋಗಿದ್ದ ಗಿರಿಯಣ್ಣ ಗೌಡರು, ನಂಬ್ಯಣ್ಣಶೆಟ್ಟ ಮೊದಲಾದ ಭಕ್ತರು ಆ ಶಬರರಾದ ಕೆಂಚದೊಡ್ಡರಿಂದ ಇನ್ನು ಮುಂದೆ ದಾಳಿಯಿಡುವುದಿಲ್ಲವೆಂಬ ನಂಬುಗೆಯನ್ನು ಪಡೆದು ಮತ್ತೆ ಮರಳಿಬಂದು ಮನೆಮಠಗಳನ್ನು ಸರಿಪಡಿಸಿಕೊಂಡು ಸುಖವಾಗಿರ ತೊಡಗಿದ್ದರು. ಅತ್ತ ಸಮಾಧಿಯಲ್ಲಿ ಕುಳಿತಿದ್ದ ಗುರುವನ್ನು ಮರೆತೇಬಿಟ್ಟರು. ಆದರೆ ನಂಬ್ಯಣ್ಣಶೆಟ್ಟಿಯ ಕಪಿಲೆ ಗೋವೊಂದು ಮಾತ್ರ ಶಿವಯೋಗಿಗಳನ್ನು ನೆನೆಸಿಕೊಂಡಿತೋ ಎಂಬಂತೆ ದಿನ ನಿತ್ಯ ಶಿವಯೋಗಿಯ ಸಮಾಧಿಯ ಹುತ್ತದ ಮೇಲೆ ಹಾಲು ಕರೆದು ಹೋಗುತ್ತಿತ್ತು. ಮನೆಯಲ್ಲಿ ಕರುವನ್ನೂ ಊಡಿಸುತ್ತಿರಲಿಲ್ಲ. ಹಾಲನ್ನು ಕೊಡುತ್ತಿರಲಿಲ್ಲ. ದಿನಕಳೆದಂತೆ ಇದರ ವರ್ತನೆಯನ್ನು ಗಮನಿಸಿದ ನಂಬ್ಯಣ್ಣಶೆಟ್ಟಿಯ ಪತ್ನಿ ಇದಕ್ಕೆ ಕಾರಣವನ್ನು ಚಿಂತಿಸುತ್ತಾಳೆ. ಈ ಕಪಿಲೆ ಏತಕ್ಕಾಗಿ ಮನೆಗೆ ಹಾಲುಕೊಡದೆ ಕರುವಿಗೂ ಮೊಲೆಕೊಡದೆ ಒದೆಯುತ್ತಿದೆ? ಮೇಯಲು ಹೋದಾಗ ಯಾವುದಾದರೂ ಸರ್ಪಕುಡಿಯುತ್ತದೆಯೋ? ಅಥವಾ ಮನೆದೇವರಿಗೆ ಏನಾದರೂ ಮೈಲಿಗೆ ಉಂಟಾಗಿ ಮುನಿಯಿತೋ? ದನಕಾಯುವವನೇ ಏನಾದರೂ ತಾನೇ ಕರೆದು ಕುಡಿಯುವನೋ? ನೀರು ಮೇವಿಲ್ಲದ ಕಡೆ ದಾದರೂ ತಾನೇ ಕರೆದು ಕುಡಿಯುವನೋ? ನೀರು ಮೇವಿಲ್ಲದ ಕಡೆ ಮೇಯಿಸಿದನೋ? ಎಂಬುದಾಗಿ ಕೊನೆಗೆ ಆ ಗೋಮಾಳನನ್ನು ಗದರಿಸಿ

ಕೇಳುತ್ತಾರೆ. ಆಗವನು ಪ್ರತಿನಿತ್ಯವೂ ಎಲ್ಲಾ ಗೋವುಗಳಂತೆ ಈ ಕಪಿಲೆಯನ್ನು ನೀರು ಮೇವು ಸಂಮೃದ್ಧವಾಗಿರುವೆಡೆಯಲ್ಲಿಯೇ ಮೇಯಿಸಿತರುವ ಸತ್ಯವನ್ನು ನುಡಿಯುತ್ತಾನೆ. ಕೊನೆಗೆ ಆ ಸತಿ ನಂಬದೆ ಗೋವಳ ಹುಡುಗನನ್ನು ಹೊಡೆಯುತ್ತಾಳೆ. ಆಗ ಅದಕ್ಕೆ ಕಾರಣವನ್ನು ಹುಡುಕಲೇಬೇಕೆಂದು ದೊಡ್ಡಿಯಿಂದ ದನಗಳ ಬಿಟ್ಟ ಕೂಡಲೇ ಕಪಿಲೆಯನ್ನು ಹಿಂಬಾಲಿಸುತ್ತಾನೆ. ಆದರೆ ಕಪಿಲೆ ಬಾಲವನೆತ್ತಿಕೊಂಡು ಸಂಭ್ರಮದಿಂದ ಓಡಿಹೋಗಿ ಹುತ್ತಕ್ಕೆ ಹಾಲು ಕರೆದು ಅವನಿಗೆ ಗೊತ್ತಾಗದಂತೆ ಬಂದು ದನಗಳ ಮಂದೆಯಲ್ಲಿ ಸೇರಿಕೊಳ್ಳುತ್ತದೆ. ಗೋವಳ ಯಥಾ ಸ್ಥಿತಿಯಲ್ಲಿ ಹುಲ್ಲು ನೀರುಗಳಿರುವ ಜಾಗದಲ್ಲಿ ಹೊಟ್ಟೆ ತುಂಬ ಮೇಯಿಸಿಕೊಂಡು ಮನೆಗೆ ಹೊಡೆತರುತ್ತಾನೆ. ಆದರೆ ಆ ದಿನವೂ ಕೂಡ ಆ ಕಪಿಲೆ ಹಾಲು ಕೊಡುವುದಿಲ್ಲ ಆಗ ದೇವರಿಗಾಗಿ ಮೀಸಲು ತೆಗೆಯುತ್ತಾಳೆ. ಆದರೂ ಹಾಲನ್ನು ಕೊಡುವುದಿಲ್ಲ. ಮತ್ತು ಈ ಹಸುವಿನ ವಿಚಿತ್ರವರ್ತನೆಗೆ ಮರುಗುತ್ತಾರೆ. ಮರುದಿವಸ ಉದಯಕಾಲದೊಳೆದ್ದು ಶಿವಪೂಜೆಗೆ ಹೂವುಗಳನ್ನು ತಿರಿಯಲು ನಂಬ್ಯಣ್ಣ ತೋಟ ಪುಷ್ಪವಾಟಿಕೆಗೆ ಹೋದಾಗ ವಿಸ್ಮಯವಾದ ಈ ಘಟನೆಯನ್ನು ಕಾಣುತ್ತಾನೆ. ಆತ ಹೂಗಳನ್ನು ಎತುತ್ತಿದ್ದಾನೆ, ಆ ಸಮಯದಲ್ಲಿ ಕಪಿಲೆ ಆ ಹುತ್ತದ ಮೆಲೆ ತನ್ನ ನಾಲ್ಕು ಕಾಲುಗಳನ್ನು ಅಗಲಿಸಿ ನಿಂತು ನಿಮಿತಿ ಧಾರಾಕಾರವಾಗಿ ಅಮೃತವನ್ನು ಕರೆಯುತ್ತಿದೆ. ನಂಬ್ಯಣ್ಣಶೆಟ್ಟಿಗೆ ಆಶ್ಚರ್ಯವಾಗುತ್ತದೆ. ಅಲ್ಲಿ ಆ ಹಿಂದೆ ಹುತ್ತವಿರಲಿಲ್ಲ. ಈಗ ಹುತ್ತ ಬೆಳೆದಿದೆ. ಈ ಹಸು ಅದರ ಮೇಲೆ ನಿಂತು ಹಾಲು ಕರೆಯುತ್ತಿದೆ. ಇದು ಚೋದ್ಯವಾಗಿದೆ. ಏನಿರಬಹುದು ಅದರೊಳಗೆ? ಎಂದು ಕುತೂಹಲದಿಂದ ಹುತ್ತದ ಹತ್ತಿರ ಬರುತ್ತಾನೆ. ತಕ್ಷಣ ಬೆದರಿ ಹುತ್ತದಿಂದ ಮೊಲವೊಂದು ಎದ್ದು ಓಡಿ ಹೋಗುತ್ತದೆ. ಹುತ್ತವನ್ನು ಇಣುಕಿ ನೋಡುತ್ತಾನೆ. ಹುತ್ತದೊಳಗೆ ಅವುಗಳ ಮರಿಗಳು ಕಾಣಿಸುತ್ತವೆ. ಹುತ್ತದೊಳಗಿರುವ ಪುರುಷನ ಗಡ್ಡದಲ್ಲಿ ಕಡಜಗಳು ಗೂಡಿಟ್ಟಿವೆ. ಹುತ್ತದ ಕೋವಿಗಳೊಳಗೆ ಸರ್ಪಗಳು ಎಡೆಬಿಚ್ಚಿ ಆಡುತ್ತವೆ. ನಂಬ್ಯಣ್ಣಶೆಟ್ಟಿ ನಿಗಯಿಟ್ಟು ನೋಡಲಾಗಿ ಯೋಗಸಮಾಧಿಯಲ್ಲಿರುವ ಶಿವಯೋಗಿಗಳು ಕಾಣಿಸುತ್ತಾರೆ. ನಂಬ್ಯಣ್ಣನಲ್ಲಿ ಆನಂದರಸ ಉಕ್ಕಿ ಹರಿಯುತ್ತದೆ. ಊರೊಳಗೆ ಓಡಿಹೋಗಿ ಗಿರಿಯಣ್ಣಗೌಡ ಮೊದಲುಗೊಂಡು ಭಕ್ತರೆಲ್ಲರನ್ನು ಕರೆದುಕೊಂಡು ಬರುತ್ತಾನೆ. ಬಂದ ಭಕ್ತರೆಲ್ಲರೂ ಹುತ್ತದ ಸುತ್ತ ಮುತ್ತ ಬೆಳೆದಿದ್ದ ಪೊದೆಯನ್ನೆಲ್ಲಾ ಕಡಿದುಹಾಕಿ ರಜವನ್ನೆಲ್ಲಾ ಗುಡಿಸಿ ಸಾರಣಿಮಾಡಿ ರಂಗವಲ್ಲಿಯನ್ನಿಟ್ಟು ಭೂಶುದ್ಧಿಯನ್ನು ಮಾಡುತ್ತಾರೆ. ಯತೀಶ್ವರನ ದರ್ಶನಮಾಡಿ ಹಾಡಿಹೊಗಳುತ್ತಾರೆ. ನಂಬ್ಯಣ್ಣಶೆಟ್ಟಿ ಹಿಂದೇ ಇದೇ ಜಾಗದಲ್ಲಿ ಶಿವಯೋಗಿಗಳಿಗೆ ಬಿನ್ನಹ ಮಾಡಿದ್ದು, ಅಷ್ಟುಹೊತ್ತಿಗೆ ಶಬರರು ಮುತ್ತಿಗೆ ಹಾಕಿದ ವಿಷಯವನ್ನು ಹೇಳಿ ನಮ್ಮನ್ನು ಶಿವಯೋಗಿಗಳು ಕಳುಹಿಸಿಕೊಟ್ಟದ್ದು ಎಲ್ಲವನ್ನು ಜೊತೆಯಲ್ಲಿ ಬಂದವರಿಗೆ ತಿಳಿಸುತ್ತಾನೆ. ಕಳೆದ ಆರು ತಿಂಗಳಿಂದ ಇಲ್ಲಿಯೇ ಸಮಾಧಿಯಲ್ಲಿ ಕುಳಿತಿರುವ ಶಿವಯೋಗಿಗಳನ್ನು ನೋಡಿ ಜನ ಆಶ್ಚರ್ಯಪಡುತ್ತಾರೆ. ಹಿಂದೆ ಪೊನ್ನಲಾಂಬದಲ್ಲಿ ವಿರಕ್ತನೆಂಬ ಹೆಸರಿನ ಶಿವಯೋಗಿ ನಾಲ್ಕು ತಿಂಗಳ ಕಾಲ ಹಸಿವು ಬಾಯಾರಿಕೆಗಳಿಲ್ಲದೆ ನಾಲ್ಕು ತಿಂಗಳ ಕಾಲ ಶಿವಯೋಗದಲ್ಲಿದ್ದನೆಂದು ತಿಳಿದಿದ್ದೆವು. ಇನ್ನೊಬ್ಬ ಏಕಪಾದಮುನಿ ಎಂಬುವನು ಕೇವಲ ತೃಣರಸವನ್ನು ಕುಡಿದು ಮೂರುವರೆ ತಿಂಗಳು ಕಾಲ ಶಿವಯೋಗ ಮಾಡಿದನೆಂದೂ ಚಿರುಪುಲಿಯರು ಎಂಬ ಜಂಗಮರು ನಲವತ್ತೈದುದಿನ ತೀರ್ಥಪ್ರಸಾದವಿಲ್ಲದೆ ಶಿವಯೋಗ ಮಾಡಿದನೆಂಬುದನ್ನು ಕೇಳಿ ತಿಳಿದಿದ್ದೆವು. ಆದರೆ ನಮ್ಮ ಸಿದ್ಧಲಿಂಗೇಶ್ವರರು ಅವರೆಲ್ಲರಿಗಿಂತಲೂ ಹೆಚ್ಚು ಕಾಲ ಆರು ತಿಂಗಳ ಕಾಲ ಹಸಿವು ತೃಷೆಗಳ ಮರೆತು ಶಿವಯೋಗದಲ್ಲಿರುವುದು ಕೇಳರಿಯದ ಚೋದ್ಯವೆಂದು ಆಶ್ಚರ್ಯಪಡುತ್ತಾರೆ. ಮತ್ತು ಶಿವಯೋಗಿಯನ್ನು ಯೋಗಚಿತ್ತಭೂಯಿಂದ ಏಳುಸುವ ಬಗೆಯನ್ನು ಚಿಂತಿಸುತ್ತಾರೆ. ಹಿರಿಯ ಶಿವಭಕ್ತ ಮಾಹೇಶ್ವರರನ್ನು ಕರೆದು ಸಮಾಲೋಚನೆಗೈಯ್ಯುತ್ತಾರೆ. ಆಗವರ ಸಲಹೆಯಂತೆ ಪಂಚವಾದ್ಯಗಳನ್ನು ತರಿಸಿ ಬಾರಿಸುತ್ತಾರೆ. ಆ ಪಂಚವಾದ್ಯಗಳ ದನಿಯ ಶ್ರವಣದಿಂದ ಶಿವಯೋಗಿಗಳು ನಿಧಾನವಾಗಿ ಶಿವಯೋಗಿದಿಂದ ಬಹಿರ್ಮುಖರಾಗಿ ಕಣ್ತೆರೆಯುತ್ತಾರೆ. ಅದನ್ನು ಕಂಡು ಭಕ್ತರು ಆನಂದದಿಂದ ತಾರಕಂಠದಿಂದ ಸುತ್ತಿಸುತ್ತಾರೆ.

*''ಗುರು ಸಿದ್ಧಲಿಂಗ ಕರುಣಾಪಾಂಗ ಭವಭಂಗ*
*ಗುರುಸಿದ್ಧಲಿಂಗೇಂದ್ರ, ನತಜನಾಂಬುಧಿ ಚಂದ್ರ,*
*ಗುರುಸಿದ್ಧಲಿಂಗಾರ್ಯ ವೀರವ್ರತಾಚಾರಚರ್ಯ ಸೌಂದರ್ಯ ವಿದ್ಯಾ!*
*ಗುರುಸಿದ್ಧಲಿಂಗ ಯತಿರಾಯ ಜಿತಮಾಯಚಿತ್ಕಾಯ*
*ಗುರುಸಿದ್ಧಲಿಂಗಯ್ಯ ಯೋಗಿಜನ ಹೃಚ್ಛಯ್ಯಾ*
*ಗುರುಸಿದ್ಧಲಿಂಗೇಶ ಸುಜ್ಞಾನ ಸಂಕಾಶ ಜಯ ಜಯಾಕಾಶಕೇಶಾ॥''*

ಮುಂತಾಗಿ. ನಂತರ ಸಾಷ್ಟಾಂಗವೆರಗಿ ''ಭಕ್ತಜನ ಬಂಧುವೇ ಹುತ್ತವನ್ನು ತೆಗೆಯುತ್ತೇವೆ. ಹೊರಗೆ ದಯಮಾಡಿಸುವುದು'' ಎಂದು ಬಿನ್ನಹ ಮಾಡುತ್ತಾರೆ. ಜೀವಜಂತುಗಳಲ್ಲಿ ಭೂತಾನು ಕಂಪೆಯುಳ್ಳ ಕಾರಣ್ಯಸಿಂಧುವಾದ ಗುರುಸಿದ್ಧಲಿಂಗೇಶ್ವರರು – ಈ ಹುತ್ತದಲ್ಲಿ ಎಳೆಯ ಮೊಲದ ಮರಿಗಳನು ಮನೆಮಾಡಿಕೊಂಡಿವೆ. ಗಡ್ಡದಲ್ಲಿ ಕಡಜಗಳು ಮೊಟ್ಟೆಯಿಟ್ಟಿವೆ. ಈಗ ನೀವು ಹುತ್ತವ ಬಡಿದರೆ ಇವೆಲ್ಲ ಸಾಯುತ್ತದೆ. ಇನ್ನು ಹತ್ತು ಹದಿನೆಂಟು ದಿನ ಕಳೆದ ಮೇಲೆ ಹೊಡೆಯಿರಿ. ಆ ಹೊತ್ತಿಗೆ ಓಡುವ ಹಾರುವಶಕ್ತಿ ಅವುಗಳಿಗೆ ಬಂದು ಹೊರಗೆ ಹೋಗುತ್ತವೆ ಎಂದು ಅಪ್ಪಣೆಕೊಡಿಸುತ್ತಾರೆ. ಅದರಂತೆ ನಂಬ್ಯಣ್ಣಶೆಟ್ಟಿ ಮೊದಲಾದವರು ಹತ್ತು-ಹದಿನೆಂಟು ದಿನಗಳು ಕಳೆದ ನಂತರ ಏಳು ನೂರುಕಂಡುಗ ಹಾಲನ್ನು ತರಿಸಿ ಹುತ್ತಕ್ಕೆ ಅಭಿಷೇಕ ಮಾಡಿಸುತ್ತಾರೆ. ಹುತ್ತಕರಗಿದ ನಂತರ ಶಿವಯೋಗಿಗಳು ಪಂಚಾಮೃತಭಿಷೇಕಗೈದು ಧೂಪದೀಪಾರತಿಗಳನ್ನು ಬೆಳಗಿ ಅಲಂಕಾರ ಗೈದು ಪುಷ್ಪಕವಿಮಾನದಂತಹ ಸಾಲಂಕೃತವಾದ ಸಿಡಿಗೆಯಲ್ಲಿ ಕುಳ್ಳಿರಿಸಿ ಕಳಶಕನ್ನಡಿ ಹಿಡಿದು ಬಿರುದು ಬಾವಲಿಗಳ ಸಮೇತ ಪುರ ಪ್ರವೇಶಮಾಡಿಸಿ ರಂಗವಲ್ಲಿ ತಳಿರು ತೋರಣಗಳಿಂದಲಂಕೃತವಾದ ಪುರ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ನಂತರ ಆರು ತಿಂಗಳ ಹಿಂದೆ ಮಾಡಿದ ಬಿನ್ನಹವನ್ನು ಪೂರೈಸುವುದಕ್ಕಾಗಿ ನಂಬ್ಯಣ್ಣ ತನ್ನ ಗೃಹಕ್ಕೆ ಬಿಜಯಂಗೈಯ್ಯುತ್ತಾರೆ. ಆ ಭಕ್ತನ ಮನೆಯ ಲಿಂಗಾರ್ಪಿತ ಮಾಡಿ ಭಕ್ತರಿಗೆ ತೀರ್ಥ ಪ್ರಸಾದವ ಕೊಟ್ಟು ಶೇಷ ಚರ ಪ್ರಸಾದವನ್ನು ನಂಬ್ಯಣ್ಣನಿಗಿತ್ತು ಎಲ್ಲರನ್ನೂ ಆಶೀರ್ವದಿಸುತ್ತಾರೆ. ಮತ್ತು ಆ ಪುಣ್ಯಪುರ ಕಗ್ಗೆರೆಯ ಪುಷ್ಪವಾಟಿಕೆಯಲ್ಲಿ (ಹೂ ತೋಂಟದಲ್ಲಿ) ಶಿವಯೋಗವನ್ನಾಚರಿಸಿದುದರಿಂದ ಅಂದಿನಿಂದ ಜಗತ್ತಿನಲ್ಲಿ ತೋಂಟದಾರ್ಯರೆಂದು ಖ್ಯಾತಿಪಡೆಯುತ್ತಾರೆ.

★





# ಮಾನವನ ಆಹಾರ ಹೇಗಿರಬೇಕು?

ಮೂಲ : ಗೋಪೀನಾಥ ಅಗರ್‌ವಾಲ
ಅನುವಾದ : ಎಸ್.ಎಸ್. ಶಾರದಾಪ್ರಸಾದ್
ಅಸೋಸಿಯೇಷನ್ ಆಫ್ ವೆಜಿಟೇರಿಯನ್ಸ್,
ದಾವಣಗೆರೆ.

**ಮಾ**ನವನು ಜೀವಿಸಲು ಗಾಳಿ ಮತ್ತು ನೀರು – ಇವೆರಡನ್ನು ಬಿಟ್ಟರೆ ಆಹಾರವೇ ಅತ್ಯಂತ ಮುಖ್ಯವಾದುದಾಗಿರುತ್ತದೆ. ಒಬ್ಬ ವ್ಯಕ್ತಿ ಏನನ್ನು ತಿನ್ನಬೇಕು? ಆಹಾರಸೇವನೆಯ ಗುರಿಯೇನು? ಒಬ್ಬ ವ್ಯಕ್ತಿ ಎಷ್ಟು ಆಹಾರ ಸೇವಿಸಬೇಕು? ಈ ಪ್ರಶ್ನೆಗಳ ಬಗ್ಗೆ ಗಮನಹರಿಸಬೇಕಾಗುತ್ತದೆ.

### *ಆಹಾರ ಸೇವನೆಯ ಗುರಿಯೇನು?*

ಮಾನವನ ಆಹಾರದ ಗುರಿಯು ಅವನ ಹೊಟ್ಟೆ ತುಂಬುವುದು; ಆರೋಗ್ಯ ಪರಿಪಾಲನೆ ಅಥವಾ ಜಿಹ್ವಾಚಾಪಲ್ಯ ಪೂರೈಕೆಯಷ್ಟೇ ಆಗಿರದೆ, ಆತನ ಮನಸ್ಸು ಮತ್ತು ಶೀಲ – ಇವನ್ನು ಸೂಕ್ತವಾಗಿ ಅಭಿವೃದ್ಧಿಪಡಿಸಬೇಕಾದುದೂ ಆಗಿರುತ್ತದೆ. ನಾವು ತೆಗೆದುಕೊಳ್ಳುವ, ಸೇವಿಸುವ ಆಹಾರವು ನಮ್ಮ ಆಲೋಚನೆ, ಶೀಲ(ಗುಣ) ಮತ್ತು ಕೆಲಸಗಳೊಡನೆ ನಿಕಟವಾಗಿ ಸಂಬಂಧ ಪಡೆದಿರುತ್ತದೆ. ''ನೀವು ಸೇವಿಸುವ ಆಹಾರದ ಬಗೆಯು ನೀನು ಎಂಥ ವ್ಯಕ್ತಿ ಎಂಬುದನ್ನು ನಿರ್ಧರಿಸುತ್ತದೆ'' ಎಂಬ ಆರ್ಷೇಯ ಸೂಕ್ತಿಯು ಇಂದಿಗೂ ಅಷ್ಟೇ ಮಟ್ಟಿಗೆ ಅನ್ವಯಿಸುತ್ತದೆ. ವಾಸ್ತವವಾಗಿ ಅದು ವ್ಯಕ್ತಿಯ ಅಂತರಂಗ ಸೂಚಕವೂ ಹೌದು. ಹಾಗಾಗಿ ನಮ್ಮ ಆಹಾರದ ಗುರಿಯು ನಮ್ಮ ದೈಹಿಕ, ನೈತಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಉನ್ನತಿಗೆ ಕಾರಣವಾಗುವಂಥ ಪದಾರ್ಥಗಳನ್ನು ಮಾತ್ರ ಸೇವಿಸುವುದಾಗಿರಬೇಕು ಮತ್ತು ಪ್ರೀತಿ ಪ್ರೇಮ ಅನುಕಂಪ ಶಾಂತಿ ಮತ್ತಿತರ ಅಂಥ ಮೌಲ್ಯಗಳನ್ನು ಬೆಳೆಸುವಂಥ ಪದಾರ್ಥಗಳನ್ನು ಮಾತ್ರ ಸೇವಿಸುವುದಾಗಿರಬೇಕು.

### *ನಮಗೆ ಯಾವ ರೀತಿಯ ಆಹಾರ ಅಗತ್ಯ*

ನಮ್ಮ ಆಹಾರವು ಶಕ್ತಿದಾಯಕ ಆರೋಗ್ಯಕರವಾದ ಮತ್ತು ಶಾಖವನ್ನು ಉತ್ಪತ್ತಿ ಮಾಡುವಂಥ ಎಲ್ಲ ಘಟಕಾಂಶಗಳನ್ನು ಒಳಗೊಂಡಿರಬೇಕು.* ನಿರಂತರವಾಗಿ ಉತ್ತಮ ಗುಣಮಟ್ಟದ ಜೀವಕೋಶಗಳನ್ನು ಮತ್ತು ಕೆಂಪು ರಕ್ತ ಕಣಗಳನ್ನು ಉತ್ಪತ್ತಿ ಮಾಡುವಂಥದಾಗಿರಬೇಕು; ಪ್ರೋಟೀನುಗಳು, ಶರ್ಕರ, ಜೀವಸತ್ತ್ವಗಳು (ಅನ್ನಾಂಗ-ವಿಟಮಿನ್), ಖನಿಜಗಳು ಮತ್ತು ಕೊಬ್ಬನ್ನು ಸಾಕಷ್ಟು ಪ್ರಮಾಣದಲ್ಲಿ ಮತ್ತು ಸರಿಯಾದ ಪ್ರಮಾಣದಲ್ಲಿ ನಮ್ಮ ಆಹಾರ ಒಳಗೊಂಡಿರಬೇಕು. ಏಕೆಂದರೆ ನಮ್ಮ ದೇಹದಲ್ಲಿ ಪ್ರತಿ ಸೆಕೆಂಡಿನಲ್ಲಿಯೂ ಮಿಲಿಯಗಟ್ಟಲೆ ಕೆಂಪು ರಕ್ತಕಣಗಳು ಉತ್ಪತ್ತಿಯಾಗುತ್ತಿರುತ್ತವೆ ಮತ್ತು ನಾಶವಾಗುತ್ತಿರುತ್ತವೆ. ಆರು ವರ್ಷಗಳ ಪ್ರತಿ ಅವಧಿಯಲ್ಲಿ ನಮ್ಮ ದೇಹದ ಎಲ್ಲ ಜೀವಕೋಶಗಳು ಮತ್ತು ಅಂಗಾಂಶಗಳು ಸಂಪೂರ್ಣವಾಗಿ ಬದಲಾಗಿ ಬಿಡುತ್ತವೆ ಎಂದು ಅಂದಾಜು ಮಾಡಲಾಗಿದೆ. ಹಾವು ಪ್ರತಿ ಆರು ತಿಂಗಳಿಗೆ ಒಂದು ಸಲ ಪೊರೆ ಕಳಚಿ, ಹೊಸ ಚರ್ಮ ಪಡೆದುಕೊಳ್ಳುವಂತೆ ನಮ್ಮ ದೇಹ ಕೂಡ ಪ್ರತಿ ಆರನೆಯ ವರ್ಷದಲ್ಲಿ (ಆರು ವರ್ಷಗಳ ಅವಧಿಯಲ್ಲಿ ಒಂದು ಸಲ) ತನ್ನ ಎಲ್ಲ ಜೀವಕೋಶಗಳು ಮತ್ತು ಅಂಗಾಂಶಗಳನ್ನು ಬದಲಾಯಿಸಿಕೊಂಡು ಬಿಡುತ್ತದೆ ಮತ್ತು ಈ ಹೊಸ ಜೀವಕೋಶಗಳ ಗುಣಮಟ್ಟವು ನಾವು ಸೇವಿಸುವ ಆಹಾರದ ಗುಣಮಟ್ಟವನ್ನೇ ಅವಲಂಬಿಸಿರುತ್ತದೆ. ಅದರಂತೆಯೇ, ನಮ್ಮ ದೇಹದ ರಕ್ಷಣಾ ವ್ಯವಸ್ಥೆ ಅಥವಾ ರೋಗ ಪ್ರತಿರೋಧ ಶಕ್ತಿಯನ್ನು ವೃದ್ಧಿಪಡಿಸುವಂಥ ಮತ್ತು ಕಶ್ಮಲ ಹಾಗೂ ನಂಜು ಪದಾರ್ಥಗಳನ್ನು ವಿಸರ್ಜಿಸುವಲ್ಲಿ, ಹೊರಹಾಕುವಲ್ಲಿ ಅಡ್ಡಿಯುಂಟುಮಾಡದಂಥ ಪದಾರ್ಥಗಳು, ವಸ್ತುಗಳು ನಮ್ಮ ಆಹಾರದಲ್ಲಿರಬೇಕು. ಹಾಗೆಯೇ ನಮ್ಮ ಆಹಾರದಲ್ಲಿ ಕಾಯಿಲೆಯುಂಟು ಮಾಡುವಂಥ, ಆರೋಗ್ಯಕ್ಕೆ ಹಾನಿಕಾರಕವಾಗುವಂಥ, ಉದ್ರೇಕ ಉಂಟುಮಾಡುವಂಥ, ಭಾವಾತ್ಮಕವಾಗಿ ಹಾಗೂ ಮಾನಸಿಕವಾಗಿ ಬಾಧೆಯುಂಟು ಮಾಡಿ, ಅಸಮತೋಲನವುಂಟು ಮಾಡುವಂಥ ಹಾಗೂ ದೇಹದಲ್ಲಿನ ನಿಯಂತ್ರಣ ಮತ್ತು ಶಿಸ್ತಿಗೆ ಹಾನಿಯುಂಟುಮಾಡುವಂಥ ಪದಾರ್ಥಗಳು ಇರಲೇಬಾರದು.

### *ನಮ್ಮ ದೇಹದ ಆಹಾರದ ಅಗತ್ಯತೆ*

ಪ್ರಕೃತಿಯು ನಮಗಾಗಿ ಅನೇಕ ಬಗೆಯ ಆಹಾರ ಧಾನ್ಯಗಳು, ಹಣ್ಣು ಹಂಪಲುಗಳು, ಸೊಪ್ಪು ತರಕಾರಿಗಳು, ಕಾಯಿಗಳು ಮೊದಲಾದುವನ್ನು ಸೃಷ್ಟಿಸಿದ್ದು, ಅವುಗಳಲ್ಲಿ ಎಲ್ಲ ಬಗೆಯ ಪೌಷ್ಟಿಕಾಂಶಗಳು ಅಗತ್ಯ ಪ್ರಮಾಣದಲ್ಲಿ ಇರುತ್ತವೆ. ಒಬ್ಬ ವ್ಯಕ್ತಿಗೆ ಒಂದು ದಿನಕ್ಕೆ ಅಗತ್ಯವಾದ ಘಟಕಾಂಶಗಳು ಹೀಗಿವೆ :

* ಅಹಿಂಸಾ ವಾಣಿ, ಜನವರಿ ೯೦, ಶ್ರಮಣ ಸಾಹಿತ್ಯ ಸಂಸ್ಥಾನ, ದೆಹಲಿ – ಇವರಿಂದ ಪ್ರಕಟಿತ

| ವ್ಯಕ್ತಿ | ಪ್ರೋಟೀನು (ಗ್ರಾಂ) | ಮೇದಸ್ಸು (ಗ್ರಾಂ) | ಕ್ಯಾಲೋರಿಗಳು (ಗ್ರಾಂ) |
|---|---|---|---|
| ಪುರುಷ (ಸಾಧಾರಣ ಕೆಲಸ) | ೬೦ | ೧೫ | ೨೭೦೦ |
| ಪುರುಷ (ಕುಳಿತುಕೊಂಡೇ ಮಾಡುವ ಕೆಲಸ) | ೬೦ | ೧೫ | ೨೩೫೦ |
| ಮಹಿಳೆ (ಸಾಧಾರಣ ಕೆಲಸ) | ೫೦ | ೧೫ | ೨೧೦೦ |
| ಮಹಿಳೆ (ಕುಳಿತುಕೊಂಡೇ ಮಾಡುವ ಕೆಲಸ) | ೫೦ | ೧೫ | ೧೮೦೦ |
| ಹುಡುಗ (೧೩-೧೫ ವರ್ಷಗಳು) | ೭೧ | ೧೫ | ೨೪೦೦ |
| ಹುಡುಗಿ (೧೩-೧೫ ವರ್ಷಗಳು) | ೬೨ | ೧೫ | ೨೦೫೦ |

ಮೇಲಿನ ಅವಶ್ಯಕತೆಗಳನ್ನು ಈ ಮುಂದಿನ ಸಸ್ಯಾಹಾರ ಪದಾರ್ಥಗಳಿಂದ ಚೆನ್ನಾಗಿ ಪಡೆಯಬಹುದು.

| ಪದಾರ್ಥ | ಪರಿಮಾಣ ಗ್ರಾಂಗಳು | ಪ್ರೋಟೀನು | ಮೇದಸ್ಸು | ಕ್ಯಾಲೋರಿಗಳು |
|---|---|---|---|---|
| ಏಕದಳ ಧಾನ್ಯಗಳು | ೪೦೦ | ೪೮.೪ | ೬.೮ | ೧೩೮೪ |
| ಬೇಳೆಕಾಳುಗಳು | ೬೦ | ೧೪.೬ | ೭.೩ | ೨೦೯ |
| ಸೊಪ್ಪು ಹಸಿರು ತರಕಾರಿಗಳು | ೧೦೦ | ೨.೦ | ೦.೭ | ೨೨ |
| ಇತರ ತರಕಾರಿಗಳು | ೭೫ | ೨.೦ | ೦.೩ | ೨೬ |
| ಗೆಡ್ಡೆ ಗೆಣಸುಗಳು | ೭೫ | ೧.೨ | – | ೭೨ |
| ಹಣ್ಣುಗಳು | ೫೦ | ೦.೩ | ೦ | ೨೪ |
| ಹಾಲು | ೨೫೦ | ೮.೦ | ೧೦.೨ | ೧೬೮ |
| ಕೊಬ್ಬು | ೨೫ | – | ೨೫.೦ | ೨೨೫ |
| ಶರ್ಕರ (ಸಕ್ಕರೆ) | ೩೦ | – | . | ೧೨೦ |
| ಒಟ್ಟು | | ೭೬.೫ | ೫೦.೩ | ೨೨೫೦ |

ನಿಮ್ಮ ಅಭಿರುಚಿ ಮತ್ತು ಆರ್ಥಿಕ ಸ್ಥಿತಿಗನುಗುಣವಾಗಿ ಸಸ್ಯಾಹಾರ ಪದಾರ್ಥಗಳಿಗೆ ಕಡಿಮೆ ಖರ್ಚಾಗು ವುದಷ್ಟೇ ಅಲ್ಲದೆ ಅವು ರೋಗಗಳ ವಿರುದ್ಧ ನಮ್ಮ ದೇಹದ ಪ್ರತಿರೋಧಶಕ್ತಿಯನ್ನು ಅಧಿಕಗೊಳಿಸುತ್ತದೆ. ಬೇಯಿಸಿದ, ಹಸಿ ತರಕಾರಿಗಳು ಮತ್ತು ಹಣ್ಣುಹಂಪಲುಗಳು ಅನೇಕ ಜಾಡ್ಯವ್ಯಾಧಿ ಗಳನ್ನು ಗುಣಪಡಿಸಬಲ್ಲ ಗುಣಗಳಿಂದ ಸುಪರಿಚಿತವಾಗಿವೆ. ಕೇವಲ ಸಸ್ಯ ಆಹಾರಗಳಲ್ಲಿ ಮಾತ್ರ ಕಂಡುಬರುವ ಕೆಲವು ಬಗೆಯ ನಾರುಪದಾರ್ಥಗಳ ಸೇವನೆಯಿಂದ ರಕ್ತದ ಕೊಲೆಸ್ಟರಾಲ್ ಮಟ್ಟ ಕಡಿಮೆಯಾಗಲು ನೆರವಾಗುವುದಷ್ಟೇ ಅಲ್ಲದೆ ಅವುಗಳಿಂದ ಸಕ್ಕರೆ ಕಾಯಿಲೆ (ಡಯಾಬಿಟಿಸ್) ಮತ್ತು ಇತರ ಅನೇಕ ರೋಗಗಳ ವಿರುದ್ಧ ರಕ್ಷಣೆಯೂ ಲಭಿಸುತ್ತದೆ.

### *ಎಷ್ಟು ಆಹಾರ ಸೇವಿಸಬೇಕು?*

ಅನೇಕರು ಹಸಿವಿಗಿಂತಲೂ ಅತಿಯಾದ ಆಹಾರ ಸೇವನೆಯಿಂದಲೇ ಸಾಯುವರು. ಹೆಚ್ಚು ತಿನ್ನುವುದಕ್ಕಿಂತಲೂ ಕಡಿಮೆ ತಿನ್ನುವುದೇ ಉತ್ತಮ. ''ನಾವು ಬದುಕುವುದಕ್ಕಾಗಿ ತಿನ್ನಬೇಕೇ ಹೊರತು ತಿನ್ನುವುದಕ್ಕಾಗಿ ಬದುಕಬಾರದು'' ಎಂಬುದನ್ನು ಚೆನ್ನಾಗಿ ನೆನಪಿಡಬೇಕು. ಹಾಗಾಗಿ ನಾವು ನಮ್ಮ ಹಸಿವಿಗಿಂತಲೂ ಸ್ವಲ್ಪ ಕಡಿಮೆ ಪ್ರಮಾಣದಲ್ಲಿಯೇ ಆಹಾರ ಸೇವಿಸಬೇಕು; ಏಕೆಂದರೆ ನಮ್ಮ ಇತರ ಅನೇಕ ಅಭ್ಯಾಸಗಳಂತೆ ತಿನ್ನುವುದು ಕೂಡ ಅಭ್ಯಾಸದ ವಿಷಯವೇ ಆಗಿರುತ್ತದೆ. ಒಂದೇ ರೀತಿಯ ಕೆಲಸ ಮಾಡುವ ಒಂದೇ ವಯಸ್ಸಿನ ವ್ಯಕ್ತಿಗಳು ಒಂದೇ ಪ್ರಮಾಣದಲ್ಲಿ ಆಹಾರ ಸೇವಿಸುವುದಿಲ್ಲ;

* ಭಾರತೀಯ ಆಹಾರ ಪದಾರ್ಥಗಳ ಪೋಷಣಾ ಮೌಲ್ಯ : ಪ್ರಕಟಣೆ : ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ನ್ಯೂಟ್ರಿಷನ್ ಐ.ಸಿ.ಎಂ.ಆರ್., ಹೈದರಾಬಾದ್.





ಕೆಲವರು ಹೆಚ್ಚು ತಿಂದರೆ ಮತ್ತೆ ಕೆಲವರು ಕಡಿಮೆ ತಿನ್ನುತ್ತಾರೆ. ಹಾಗೆಂದರೆ ಕಡಿಮೆ ತಿನ್ನುವವರು ಹೆಚ್ಚಾಗಿ ತಿನ್ನುವವರಿಗಿಂತ ಕಡಿಮೆ ಆರೋಗ್ಯವಂತರೆಂದೇನೂ ಅಲ್ಲ, ಇಲ್ಲವೇ ದುಬಾರಿಯಾದ ಆಹಾರ ಸೇವಿಸುವವರು ಅಗ್ಗವಾದ ಪೌಷ್ಟಿಕ ಆಹಾರ ಸೇವಿಸುವವರಿಗಿಂತ ಹೆಚ್ಚು ಬಲಶಾಲಿಗಳು ಎಂದು ಅಲ್ಲ. ತಮ್ಮ ಹಸಿವಿಗಿಂತ ಯಾರು ಹೆಚ್ಚು ತಿನ್ನುವರೋ ಅವರು ಸ್ಥೂಲಕಾಯರೂ, ಬೊಜ್ಜು ಮೈಯಿನವರೂ ಆಗುವರು; ಇದರಿಂದ ಅವರು ಆಲಸಿಗಳು, ಸೋಮಾರಿಗಳೂ ಆಗುವರು; ಇದರಿಂದ ಅಜೀರ್ಣ, ಮಲಬದ್ಧತೆ ಮತ್ತಿತರ ಜಾಡ್ಯಗಳಿಗೆ ಅವರು ಗುರಿಯಾಗುವರು. ಅತಿಯಾಗಿ ಮಿತಿಮೀರಿ ತಿನ್ನುವುದೇ ಹಲವು ಕಾಯಿಲೆಗಳಿಗೆ ಮೂಲಕಾರಣವಾಗುತ್ತದೆ.

''**ಹೊ**ಟ್ಟೆಯ ಸುತ್ತಳತೆ ಹೆಚ್ಚಿದಷ್ಟೂ ನಿಮ್ಮ ಆಯುಷ್ಯ ರೇಖೆ ಕಡಿಮೆಯಾಗುತ್ತದೆ'' ಎಂಬ ಸೂಕ್ತಿಯೇ ಇದೆ. ವ್ಯಕ್ತಿಯು ತನ್ನ ಹೊಟ್ಟೆಯ ಅರ್ಧಭಾಗವನ್ನು ಮಾತ್ರ ಆಹಾರದಿಂದ, ಕಾಲು ಭಾಗವನ್ನು ನೀರಿನಿಂದ ತುಂಬಬೇಕು ಮತ್ತು ಉಳಿದ ಕಾಲುಭಾವನ್ನು ಹಾಗೆಯೇ ಬಿಟ್ಟಿದ್ದು ದೈವದ ಮಹಿಮೆಯಿಂದ ತುಂಬುತ್ತದೆ ಎಂದು ಮಹಾನ್ ಸೂಫಿ ಸಂತ ಷೇಖ್ ಸಾದಿ ಸೂಚಿಸಿರುವನು. ರುಚಿಕರವಾದ ಆಹಾರಗಳನ್ನು ಹೆಚ್ಚಾಗಿ ತಿನ್ನುವುದರಿಂದ ವ್ಯಕ್ತಿ ತನ್ನ ಆರೋಗ್ಯಕ್ಕೆ ತಾನೇ ಹಾನಿಯುಂಟು ಮಾಡಿಕೊಳ್ಳುವನು. ಕಡಿಮೆ ತಿನ್ನಬೇಕು ಎಂದು ಶಾಸ್ತ್ರಗಳು ಶಿಷ್ಯರು ಮತ್ತು ಸಾಧಕರಿಬ್ಬರಿಗೂ ಸೂಚಿಸಿದ್ದು, ಇವರ ಅವರ ಪ್ರಯತ್ನ ಸಾಹಸಗಳಲ್ಲಿ ಸಫಲರಾಗಬೇಕಾದಲ್ಲಿ ಅತ್ಯಗತ್ಯವೆಂದು ಸೂಚಿಸಿವೆ.

**ಸ**ಸ್ಯಾಹಾರದ ಅತ್ಯಂತ ದೊಡ್ಡ ಅನುಕೂಲವೆಂದರೆ ಅದು ಗಾತ್ರದಲ್ಲಿ ದೊಡ್ಡದಾಗಿದ್ದು ನಮ್ಮ ಹಸಿವನ್ನು ಶೀಘ್ರವಾಗಿ ತಣಿಸುತ್ತದೆ. ಅದರಲ್ಲಿ ಕೊಲೆಸ್ಟರಾಲ್ ಪ್ರಮಾಣ ಕಡಿಮೆಯಿದ್ದು, ಸಾಮಾನ್ಯವಾಗಿ ಕಡಿಮೆ ತೀಕ್ಷ್ಣದ್ದಾಗಿರುತ್ತದೆ. ಹಾಗಾಗಿ, ದೇಹದ ಅಗತ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಸಸ್ಯಾಹಾರ ಪದಾರ್ಥ ಸೇವನೆಯು ಕಷ್ಟಕರವಾಗಿರುತ್ತದೆ. ಹಾಗಾಗಿ ಬೊಜ್ಜು ನಿಯಂತ್ರಣದಲ್ಲಿರುತ್ತದೆ.

**ನ**ಮ್ಮ ದೇಹ ಅತ್ಯದ್ಭುತವಾದ ಸಂಕೀರ್ಣ ಯಂತ್ರದಂತಿದೆ; ಅದು ಶ್ವಾಸೋಚ್ಛ್ವಾಸ, ರಕ್ತ ಪರಿಚಲನೆ ಮತ್ತು ಶುದ್ಧೀಕರಣ, ಹೊಸ ರಕ್ತೋತ್ಪಾದನೆ, ಜೀರ್ಣಕ್ರಿಯೆ, ದೇಹದಿಂದ ಕಷ್ಮಲಗಳು ಹಾಗೂ ನಂಜಿನಪದಾರ್ಥಗಳನ್ನು ವಿಸರ್ಜಿಸುವುದು ಮತ್ತಿತರ ಅನೇಕ ಕಾರ್ಯಗಳಲ್ಲಿ ನಿರಂತರವಾಗಿ ತೊಡಗಿಯೇ ಇರುತ್ತದೆ. ಇತರ ಯಂತ್ರಗಳಂತೆಯೇ ಈ ದೇಹಕ್ಕೂ ವಿಶ್ರಾಂತಿ ಅಗತ್ಯ. ವಾರಕ್ಕೆ ಒಂದು ದಿನ ಉಪವಾಸ ಮಾಡುವುದರ ಮೂಲಕ ಆ ವಿಶ್ರಾಂತಿ ದೊರಕಿಸಿ ಕೊಡಬಹುದಾಗಿದೆ. ಈ ಕ್ರಮದಿಂದ, ಪರಿಪಾಠದಿಂದ ನಮ್ಮ ಜೀರ್ಣಾಂಗ ವ್ಯವಸ್ಥೆ ಮತ್ತು ಮೂತ್ರಪಿಂಡಗಳ ಮೇಲಣ ಒತ್ತಡ ಕಡಿಮೆ ಮಾಡಿ, ಹಲವು ಬಗೆಯ ರೋಗರುಜಿನಗಳು . ಬರುವುದನ್ನು ತಡೆಗಟ್ಟಬಹುದಾಗಿರುತ್ತದೆ. ಹೆಚ್ಚು ಹೆಚ್ಚು ಆಹಾರ ಸೇವನೆ ಎಂದರೆ ಹೆಚ್ಚು ಹೆಚ್ಚು ಆರೋಗ್ಯ ಎಂದರ್ಥವಲ್ಲ. ಈ ಯಂತ್ರಕ್ಕೆ ನೀವು ಕಡಿಮೆ ಹಾಕಿದಷ್ಟೂ ಅದು ಸಮರ್ಥವಾಗಿ ಕಾರ್ಯನಿರ್ವಹಿಸುತ್ತದೆ; ನೀವು ಅದಕ್ಕೆ ಹೆಚ್ಚು ಹೆಚ್ಚು ಹಾಕಿದಷ್ಟೂ ಅದು ನಿಮಗೆ ಕಡಿಮೆ ಫಲಕಾರಿಯಾಗಿಬಿಡುತ್ತದೆ. ''ಆಹಾರವನ್ನು ನಮಗಾಗಿ ಮಾಡಲಾಗಿದೆಯಲ್ಲದೆ, ನಮ್ಮನ್ನು ಆಹಾರಕ್ಕಾಗಿ, ನಾವು ತಿನ್ನಲೆಂದೇ ಸೃಷ್ಟಿಸಿಲ್ಲ.'' ಹಾಗಾಗಿ ಆರೋಗ್ಯವಂತರಾಗಿರಬೇಕಾದರೆ ನಮ್ಮ ತತ್ತ್ವ ''ಕಡಿಮೆ ತಿನ್ನು – ಹೆಚ್ಚು ತಾಳ್ಮೆ ಇರಲಿ'' ಎಂಬುದೇ ಆಗಿರಬೇಕು.

### *ದೈಹಿಕ ಹಸಿವು ಮತ್ತು ಮಾನಸಿಕ ಹಸಿವು – ಇವುಗಳ ನಡುವೆ ವ್ಯತ್ಯಾಸ*

**ಮ**ನುಷ್ಯ ತನ್ನ ಎಲ್ಲ ಕಾರ್ಯ, ಕೃತ್ಯಗಳನ್ನೂ ಸಮರ್ಥಿಸಿಕೊಳ್ಳುವ ಸಲುವಾಗಿ, ತಾನು ತನ್ನ ದೈಹಿಕ ಹಸಿವನ್ನು ತಣಿಸುವ ಸಲುವಾಗಿಯೇ ಎಲ್ಲವನ್ನೂ ಮಾಡಬೇಕಾಗುತ್ತದೆ ಎಂದು ಅನೇಕ ಸಲ ಹೇಳುವುದುಂಟು. ಹಸಿವಿನಿಂದ ಮನುಷ್ಯ ಚಡಪಡಿಸಲಾರಂಭಿಸುತ್ತಾನೆ, ಅದು ಅವನು ತಪ್ಪು ದಾರಿ ತುಳಿಯುವಂತೆಯೂ ಮಾಡುತ್ತದೆ ಎಂಬುದು ನಿಜವೇ; ಆದರೆ ಹಸಿವಿನ ಅಗತ್ಯತೆಯೂ ತುಂಬ ಸೀಮಿತವಾಗಿದ್ದು, ಪಾಪಕರವಾದ ಅಥವಾ ಅಪರಾಧದ ಕೃತ್ಯಗಳಿಗಿಳಿಯದೇ ಕಷ್ಟಪಟ್ಟು ದುಡಿಯುವ ಮೂಲಕ ಅದನ್ನು ತಣಿಸಬಹುದು ಎಂಬು ಅದಕ್ಕಿಂತಲೂ ಹೆಚ್ಚು ನಿಜವಾದ ಮಾತಾಗಿದೆ. ಎಂದೆಂದಿಗೂ ತಣಿಯದ ಮತ್ತು ಅದನ್ನು ತಣಿಸುವುದಕ್ಕಾಗಿ ಅನೇಕರು ದುಷ್ಕೃತ್ಯಗಳನ್ನು ಮಾಡುವುದ ದೈಹಿಕ ಹಸಿವಲ್ಲ; ಅದು ಮಾನಸಿಕ ಹಸಿವೇ ಆಗಿರುತ್ತದೆ. ಈ ಮಾನಸಿಕ ಆಲಸ್ಯ, ಇರುಸು ಮುರುಸು ಅಧಿಕಗೊಳ್ಳುತ್ತಲೇ ಸಾಗುತ್ತದೆ. ಅದನ್ನು ತೃಪ್ತಿಪಡಿಸಲು ವ್ಯಕ್ತಿ ಹೆಚ್ಚು ಹೆಚ್ಚು ಪ್ರಯತ್ನಿಸಿದಷ್ಟೂ, ಅದು ಮತ್ತಷ್ಟು ವೃದ್ಧಿಗೊಳ್ಳುತ್ತದೆ, ಬೆಳೆಯುತ್ತದೆ; ಅದರಿಂದಾಗಿ ಮೋಸ, ವಂಚನೆ, ಕಿಚ್ಚಿಡುವುದು, ಅಪರಾಧ, ಕೊಲೆ ಮತ್ತಿತರ ದುರಭ್ಯಾಸ, ದುಷ್ಕೃತ್ಯಗಳಿಗೆ ಆತನನ್ನು ದೂಡುತ್ತವೆ; ಇದರಿಂದ ಭೀತಿ, ಆತಂಕ, ದ್ವೇಷ, ಹಗೆತನಗಳು ಹೆಚ್ಚುತ್ತವೆ. ಇದೇ ಸಕಲ ದುಷ್ಕೃತ್ಯಗಳಿಗೂ, ರೋಗರುಜಿನಗಳಿಗೂ ಮುಖ್ಯ ಕಾರಣವಾಗುತ್ತದೆ.

**ಹೊ**ಟ್ಟೆಯ ಹಸಿವನ್ನು ತೃಪ್ತಿಪಡಿಸಬಹುದು, ಆದರೆ ಮಾನಸಿಕ ಹಸಿವನ್ನು ತೃಪ್ತಿಪಡಿಸಲಾಗುವುದಿಲ್ಲ ಎಂದು ಅನೇಕ ವೇಳೆ ಹೇಳುವುದುಂಟು. ಈ ನಿತ್ಯನಿರಂತರ ಮಾನಸಿಕ ಹಸಿವೇ ನಮ್ಮ ಸಮಸ್ಯೆಗಳ ಪೈಕಿ ಹೆಚ್ಚಿನವನ್ನು ಸೃಷ್ಟಿಸುತ್ತವೆ. ಹಾಗಿರುವುದರಿಂದಲೇ ಈ ಎರಡು ಬಗೆಯ ಹಸಿವುಗಳ ನಡುವೆ ವ್ಯತ್ಯಾಸ ಅರಿಯಬೇಕಾದುದು ಮಾನವನ ಹಿತಾಸಕ್ತಿಯಿಂದ ಅತ್ಯಂತ ಅಗತ್ಯವೂ, ಅನಿವಾರ್ಯವೂ ಆಗಿರುತ್ತದೆ.

★



# ಪ್ರಾರಂಭಿಕ ಚಿಕಿತ್ಸೆ ಮತ್ತು ಅದರ ಉಪಯೋಗ

– ಡಾ. ಎಂ.ಎಸ್. ರಾಜಣ್ಣ
ಪ್ರಾಧ್ಯಾಪಕರು,
ಸಮುದಾಯ ವೈದ್ಯಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು,
ಬೆಂಗಳೂರು. ದೂರವಾಣಿ (ಮನೆ) 23354435

''ಏನು ಡಾಕ್ಟ್ರೇ, ನನಗೆ ತಲೆನೋವಿಲ್ಲ, ತಲೆಸುತ್ತಿಲ್ಲ, ನನಗೆ ಬ್ಲಡ್‌ಪ್ರೆಜರ್ ಇದೆ ಅಂತೀರಲ್ಲ, ದಯವಿಟ್ಟು ಇನ್ನೊಂದು ಸರಿ ನೋಡ್ತೀರ. ನಾನೇನು ಜಾಸ್ತಿ ಸಿಹಿತಿಂಡಿ ತಿನ್ನಲ್ಲ; ಡಯಾಬಿಟೀಸ್ ಇದೆ ಅಂತ ಹೇಳ್ತಿರ, ಇನ್ನೊಂದು ಲ್ಯಾಬೋರೇಟರಿನಲ್ಲಿ ಟೆಸ್ಟ್ ಮಾಡಿಸಿಕೊಂಡು ಬರುತ್ತೇನೆ. ನನಗೇನು ಜಾಸ್ತಿ ಕೆಮ್ಮಿಲ್ಲ ಆದರೆ ಟಿ.ಬಿ. ಕಾಯಿಲೆ ಅಂತೀರ. ಇನ್ನೊಂದು ಸಲ ಎಲ್ಲ ಪರೀಕ್ಷೆ ಮಾಡಿಸ್ತೀರ''. ಇಂತಹ ಮಾತುಗಳನ್ನು ರೋಗಿಗಳಿಂದ ವೈದ್ಯರು ಪ್ರತಿನಿತ್ಯ ಕೇಳುವುದು ಸರ್ವೇ ಸಾಮಾನ್ಯ. ಅನೇಕ ರೋಗಗಳಲ್ಲಿ ಪ್ರಾರಂಭದ ಹಂತದಲ್ಲಿ ರೋಗ ಚಿಹ್ನೆಗಳು ಕಾಣದೇ ಇರಬಹುದು ಅಥವಾ ಕಡಿಮೆ ಪ್ರಮಾಣದಲ್ಲಿ ಇರಬಹುದು. ಅನೇಕ ರೋಗಿಗಳು ಪ್ರಾರಂಭದ ಹಂತದಲ್ಲಿ ವೈದ್ಯರನ್ನು ಭೇಟಿ ಮಾಡಿ ಸಲಹೆ ಪಡೆಯುವುದಿಲ್ಲ. ತಾತ್ಸಾರ ಮಾಡುತ್ತಾರೆ. ವೈದ್ಯರು ಪರೀಕ್ಷಿಸಿ ರೋಗದ ಬಗ್ಗೆ ತಿಳಿಸಿದರೂ ಸಹ ಅನುಸರಿಸಬೇಕಾದ ಕ್ರಮಗಳ ಬಗ್ಗೆ ರೋಗಿಗಳು ಗಮನಹರಿಸುವುದಿಲ್ಲ. ಅನೇಕ ಡಯಾಬಿಟಿಸ್ ರೋಗಿಗಳಿಗೆ ಯಾವುದೇ ತೊಂದರೆ ಇರುವುದಿಲ್ಲ ''ಒಂದು ಸಣ್ಣ ಗಾಯ ವಾಸಿಯಾಗಿಲ್ಲ, ಒಳ್ಳೆಯ ಮುಲಾಮು ಬರೆದುಕೊಡಿ'' ಎಂದು ವೈದ್ಯರ ಹತ್ತಿರ ಬರುತ್ತಾರೆ. ವೈದ್ಯರು ಡಯಾಬಿಟೀಸ್ ಇರಬಹುದೆಂದು ರಕ್ತಪರೀಕ್ಷೆ ಮಾಡಿ ಡಯಾಬಿಟೀಸ್ ತೊಂದರೆ ಇದೆ ಎಂದು ಹೇಳಿದರೆ ವೈದ್ಯರನ್ನು ನಂಬುವುದಿಲ್ಲ. ಪುನಃ ವೈದ್ಯರ ಸಲಹೆ ಪಡೆಯಲು ಹೆದರುತ್ತಾರೆ. ಕೆಲವು ತಿಂಗಳುಗಳು ಅಥವಾ ವರ್ಷಗಳ ನಂತರ ಡಯಾಬಿಟೀಸ್ ತೊಂದರೆಗಳು ಹೆಚ್ಚಾಗಿ ಹೃದಯ, ಮೂತ್ರಪಿಂಡಗಳ ವಿಫಲತೆ, ಕಣ್ಣು, ನರಮಂಡಲದ ಮೇಲೆ ಕೆಟ್ಟ ಪರಿಣಾಮಗಳು ಉಂಟಾದ ಮೇಲೆ ವೈದ್ಯರ ಹತ್ತಿರ ಬಂದು ''ಎಷ್ಟು ಖರ್ಚಾದರೂ ಪರವಾಗಿಲ್ಲ, ದಯವಿಟ್ಟು ವಾಸಿಮಾಡಿ ಎಂದು ಗೋಗರೆಯುತ್ತಾರೆ. ''ಹಣದಿಂದ ಔಷಧಿಯನ್ನು ಖರೀದಿಸಬಹುದು, ಆರೋಗ್ಯವನ್ನಲ್ಲ'' ಎಂಬ ವಿಷಯವನ್ನು ಅರಿಯುವುದಿಲ್ಲ. ಇದೇ ರೀತಿಯಲ್ಲಿ ಶೇಕಡ ೫೦ರಷ್ಟು ಮಂದಿ ಬ್ಲಡ್ ಪ್ರೆಜರ್ ಅಂದರೆ ಅಧಿಕ ರಕ್ತದ ಒತ್ತಡ ಇರುವ ರೋಗಿಗಳಿಗೆ ಹೆಚ್ಚಾಗಿ ತೊಂದರೆಗಳು ಕಂಡುಬರುವುದಿಲ್ಲ. ವೈದ್ಯರು, ಜೀವನಕ್ರಮದಲ್ಲಿ ಮಾರ್ಪಾಡು, ಮಾತ್ರೆ ಸೇವನೆ ಬಗ್ಗೆ ಸಲಹೆ ಮಾಡಿದರೆ ಅವುಗಳನ್ನು ಪಾಲಿಸುವುದಿಲ್ಲ. ಈ ವಿಷಯದಲ್ಲಿ ಹಣಕ್ಕಿಂತಲೂ ಉದಾಸೀನ ಮನೋಭಾವ ಮುಖ್ಯ ಕಾರಣವಾಗಿರುತ್ತದೆ. ರಕ್ತದ ಒತ್ತಡ ಅಧಿಕವಾಗಿ ಅದರ ದುಷ್ಪರಿಣಾಮಗಳು ಹೃದಯ, ಮೆದುಳು ಮೂತ್ರಪಿಂಡಗಳ ಮೇಲೆ ಉಂಟಾದಾಗ ತೊಂದರೆ ಅನುಭವಿಸುತ್ತಾರೆ. ಅನೇಕ ರೋಗಗಳಲ್ಲಿ ತುರ್ತುಸ್ಥಿತಿ ಕಂಡುಬರುವುದು ನಿಜಕ್ಕೂ ತುರ್ತುಸ್ಥಿತಿಯಲ್ಲ. ವೈದ್ಯಕೀಯರಂಗದಲ್ಲಿ ಆಧುನಿಕ ಸಂಶೋಧನೆಗಳಿಂದ ಅನೇಕ ರೋಗಗಳನ್ನು ಪ್ರಾರಂಭದ ಹಂತದಲ್ಲಿಯೇ ಗುರುತಿಸಬಹುದು. ಇಂತಹ ಸಂದರ್ಭಗಳಲ್ಲಿ ವೈದ್ಯರಲ್ಲಿ ನಂಬಿಕೆಯಿಟ್ಟು ಸಲಹೆ ಪಡೆದರೆ ಅನೇಕ ದುಷ್ಪರಿಣಾಮಗಳನ್ನು ತಡೆಗಟ್ಟಬಹುದು. ಕೆಲವು ರೋಗಗಳು ಬಾರದಂತೆ ತಡೆಗಟ್ಟುವ ಕ್ರಮಗಳು ಸಹ ಲಭ್ಯವಿದೆ. ಉತ್ತಮಮಟ್ಟದ ಲಸಿಕೆಗಳು, ಹೊಸ ಹೊಸ ಲಸಿಕೆಗಳು ಲಭ್ಯವಿದೆ. ಲಸಿಕೆಗಳನ್ನು ಕಾಲ ಕಾಲಕ್ಕೆ ಪಡೆದು ಸಂಬಂಧಪಟ್ಟ ರೋಗಗಳು ಬಾರದಂತೆ ತಡೆಗಟ್ಟಬಹುದು. ಉದಾಹರಣೆಗೆ ಹೆಪಟೈಟಿಸ್ 'ಎ' ಲಸಿಕೆ, ಹೆಪಟೈಟಿಸ್ 'ಬಿ' ಲಸಿಕೆ, ಟೈಪಾಯಿಡ್ ಲಸಿಕೆ ಇತ್ಯಾದಿ. ರೋಗಗಳು ಕಂಡುಬಂದರೆ ಸರಿಯಾದ ಸಮಯಕ್ಕೆ ಸರಿಯಾದ ಚಿಕಿತ್ಸೆ ಪಡೆಯಬೇಕು. ಹಾಗೂ ಸಂಪೂರ್ಣ ಚಿಕಿತ್ಸೆ ಪಡೆಯಬೇಕು. ಅರ್ಧಂಬರ್ಧ ಚಿಕಿತ್ಸೆ, ಸ್ವಯಂ ಚಿಕಿತ್ಸೆ ಇವುಗಳು ಅಪಾಯಕಾರಿ. ಉದಾಹರಣೆಗೆ ಮಲೇರಿಯ ರೋಗಿಗಳು ಕೇವಲ ಕ್ಲೋರೋಕ್ವಿನ್ ಮಾತ್ರೆ ಸೇವನೆಯಿಂದ ಜ್ವರ ಕಡಿಮೆಯಾಗಬಹುದು. ಆದರೆ ಇದು ಸಂಪೂರ್ಣ ಚಿಕಿತ್ಸೆ ಅಲ್ಲ. ರಕ್ತ ಲೇಪನ ಪರೀಕ್ಷೆಯಿಂದ ಮಲೇರಿಯ ಎಂದು ಖಚಿತವಾದ ಮೇಲೆ ಸಂಪೂರ್ಣ ಚಿಕಿತ್ಸೆಗಾಗಿ ಪ್ರೈಮಾಕ್ವಿನ್ ಮಾತ್ರೆಯನ್ನು ವೈದ್ಯರ ಸಲಹೆಯಂತೆ ಸೇವನೆ ಮಾಡಿದಾಗ ಮಾತ್ರ, ಅದು ಮಲೇರಿಯ ರೋಗಕ್ಕೆ ಸಂಪೂರ್ಣ ಚಿಕಿತ್ಸೆಯಾಗುತ್ತದೆ. ಇಲ್ಲದಿದ್ದರೆ ಮಲೇರಿಯ ರೋಗ ಮರುಕಳಿಸುವುದು ಖಚಿತ. ಇದೇ ರೀತಿ ಅನೇಕ ರೋಗಿಗಳು ಕ್ಷಯರೋಗದಿಂದ ನರಳುತ್ತಿದ್ದರೂ ಸಹ ಕೆಮ್ಮು, ಜ್ವರ ಕಡಿಮೆಯಾಗುತ್ತದೆ ಎಂದು ಸ್ವಯಂ ಚಿಕಿತ್ಸೆ ಪಡೆಯುತ್ತ ಮುಂದೂಡುತ್ತಾರೆ. ವೈದ್ಯರು ಪರೀಕ್ಷೆಮಾಡಿ ಕ್ಷಯರೋಗ ವೆಂದು ಗುರುತಿಸಿ ಸಂಪೂರ್ಣ ಚಿಕಿತ್ಸೆ ಬಗ್ಗೆ ಸಲಹೆ ನೀಡಿದರೂ ಸಹ ಕೆಲವು ದಿನಗಳು ಔಷಧಿ ಸೇವನೆ ಮಾಡಿ ಕೆಮ್ಮು ಜ್ವರ ಕಡಿಮೆ ಆಯಿತು ಎಂದುಕೊಂಡು ಔಷಧಿ ಸೇವನೆ ನಿಲ್ಲಿಸುತ್ತಾರೆ.

ಕ್ಷಯರೋಗ ನಿಯಂತ್ರಣ ಕಾರ್ಯಕ್ರಮದಲ್ಲಿ ಇದೆ ಒಂದು ತೊಡಕಾಗಿ ಕಂಡುಬಂದಿದೆ. ಒಟ್ಟಿನಲ್ಲಿ ಹೇಳಬೇಕೆಂದರೆ ನಿಮ್ಮ ವೈದ್ಯರಲ್ಲಿ ನಂಬಿಕೆ ಇಡಬೇಕು. ಕೆಲವು ರೋಗಗಳನ್ನು ಪ್ರಾರಂಭದಲ್ಲಿಯೇ ಗುರುತಿಸಲು ಸಾಧ್ಯ. ಪ್ರಾರಂಭದಲ್ಲಿಯೆ ಗುರುತಿಸಿ ಚಿಕಿತ್ಸೆ ಪಡೆದರೆ ಹಲವು ಸಾಂಕ್ರಾಮಿಕ ರೋಗಗಳನ್ನು ಸಂಪೂರ್ಣವಾಗಿ ಗುಣಪಡಿಸಬಹುದು. ಸಾಂಕ್ರಾಮಿಕವಲ್ಲದ ಹಾಗೂ ದೀರ್ಘಕಾಲದ ರೋಗಗಳಾದ ಡಯಾಬಿಟೀಸ್, ರಕ್ತದೊತ್ತಡ ಮುಂತಾದ ತೊಂದರೆಗಳಿಗೆ ಪ್ರಾರಂಭದಲ್ಲಿಯೇ ಎಚ್ಚರಿಕೆ ವಹಿಸಿ ಚಿಕಿತ್ಸೆ ಪಡೆದರೆ ಮುಂದೆ ಉಂಟಾಗಬಹುದಾದ ದುಷ್ಪರಿಣಾಮಗಳನ್ನು ಮುಂದೂಡಬಹುದು.

★





# ಚಂದ್ರಾ ಬಡಾವಣೆಯಲ್ಲಿರುವ ಶ್ರೀ ಸಿದ್ಧಗಂಗಾ ಪಬ್ಲಿಕ್ ಶಾಲೆಯಲ್ಲಿ ವಿವಿಧ ಕಾರ್ಯಕ್ರಮಗಳು

### *ಮಹಾತ್ಮ ಗಾಂಧಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿ ಜಯಂತಿ*

ಅಕ್ಟೋಬರ್ ೨ರಂದು ಗಾಂಧಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿ ಅವರ ಜನ್ಮದಿನಾಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸಲಾಯಿತು. ಶ್ರೀಮತಿ ಎಸ್.ಆರ್. ಶೈಲಜಾರವರ ಪ್ರಾರ್ಥನೆಯೊಂದಿಗೆ ಆರಂಭಗೊಂಡ ಕಾರ್ಯಕ್ರಮಕ್ಕೆ ಹಿರಿಯ ಸಾಹಿತಿ ಶ್ರೀ ಎಚ್.ಎಸ್. ಸಿದ್ಧಗಂಗಪ್ಪರವರು ದೀಪ ಬೆಳಗಿಸುವ ಮೂಲಕ ಚಾಲನೆ ನೀಡಿದರು. ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಚಂಪಕಮಾಲಿನಿಯವರು ಸ್ವಾಗತಿಸಿ, ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀಮತಿ ಗಾಯತ್ರಿ, ರುದ್ರೇಶ್‌ರವರು ಮಕ್ಕಳಿಗೆ ಪ್ರಶಸ್ತಿ ಪ್ರದಾನ ಮಾಡಿ, ಅವರಿಗೆ ಸಿಹಿಯ ವ್ಯವಸ್ಥೆ ಮಾಡಿದ್ದಲ್ಲದೆ, ಶಾಲೆಗೆ ಚೆಕ್ ಮೂಲಕ ದೇಣಿಗೆಯನ್ನು ನೀಡಿ ಇತರರಿಗೆ ಮಾರ್ಗದರ್ಶಿಯಾದರು. ಕುಮಾರಿ ಸುಮಂಗಲರವರು ಕಾರ್ಯಕ್ರಮ ನಿರ್ವಹಣೆ ಮಾಡಿದರು. ಶ್ರೀಮತಿ ಸುಧಾಮಣಿಯವರು ಶರಣು ಸಮರ್ಪಣೆ ಮಾಡಿದರು.

### *ಮಹಿಷಾಸುರ ಮರ್ದಿನಿ ನೃತ್ಯ ರೂಪಕ*

ದಿನಾಂಕ ೨೯-೯-೨೦೦೪ರಂದು ಸಿದ್ಧಗಂಗಾ ಪಬ್ಲಿಕ್ ಶಾಲೆಯ ಸಭಾಂಗಣದಲ್ಲಿ **"Spic Macay" (Society for the promotion of Indian Classical Music and culture amongst youth)**ನವರು ಆಯೋಜಿಸಿದ್ದ ಒಂದು ಅತ್ಯಾಕರ್ಷಕ ಮತ್ತು ಮನೋಹರ ಸಾಂಸ್ಕೃತಿಕ ನೃತ್ಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

**"SPIC MACAY"** ಇಂದಿನ ಯುವಪೀಳಿಗೆಗೆ, ಭಾರತ ದೇಶದಲ್ಲಿ ಸಂಮೃದ್ಧವಾಗಿರುವ ಸಂಸ್ಕೃತಿ, ಶಾಸ್ತ್ರೀಯ ಕಲೆಗಳು ಮತ್ತು ತಾತ್ವಿಕ ವಿಚಾರಧಾರೆಗಳನ್ನು ತಿಳಿಯ ಹೇಳುವ ಧ್ಯೇಯೋದ್ದೇಶದಿಂದ ಅಂತರರಾಷ್ಟ್ರೀಯ ಮಟ್ಟದಲ್ಲಿ ಸೇವಾ ನಿರತವಾದ ಒಂದು ಸಂಸ್ಥೆಯಾಗಿದೆ.

**"SPIC MACAY"** ರವರು ಭಾರತದ ಮೂಲೆ-ಮೂಲೆಗಳಲ್ಲಿ ಇದುವರೆವಿಗೂ ಅಗೋಚರವಾಗಿ, ಎಲೆಮರೆಯ ಕಾಯಂತಿರುವ ಎಲ್ಲ ರೀತಿಯ ಕಲೆ, ಸಂಗೀತ, ನೃತ್ಯ ಪ್ರಕಾರಗಳನ್ನು ಭಾರತದಾದ್ಯಂತ ಪ್ರದರ್ಶಿಸುವ ಉದ್ದೇಶವನ್ನು ಹೊಂದಿದೆ.

ಈ ತಂಡದವರು ಅಭಿನಯಿಸಿದ ''ಮಹಿಷಾಸುರ ಮರ್ದಿನಿ'' ನೃತ್ಯವಂತೂ ನೋಡುಗರ ಮನಸ್ಸನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ಅವರ ರಂಗುರಂಗಿನ ಉಡುಗೆಗಳು, ಜೀವಂತ ಪ್ರಾಣಿಗಳಿಗಿಂತಲೂ ಹೆಚ್ಚಾಗಿ ಕಾಣಿಸಿಕೊಂಡ ಸಿಂಹ, ಹಸು, ನವಿಲುಗಳು ಮಕ್ಕಳನ್ನು ಮೂಕವಿಸ್ಮಿತರನ್ನಾಗಿಸಿದವು.

ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಚಂಪಕಮಾಲಿನಿಯವರ ಸ್ವಾಗತದೊಂದಿಗೆ ಆರಂಭಗೊಂಡ ಕಾರ್ಯಕ್ರಮ ಕುಮಾರಿ ಸುಮಂಗಲರವರು ನಿರೂಪಣೆ ಮಾಡಿದರು. ಶಾಲೆಯ ಕಾರ್ಯದರ್ಶಿಗಳಾದ ಶ್ರೀ ಬಿ.ಎನ್. ಚನ್ನಪ್ಪರವರು ಮತ್ತು ಖಜಾಂಚಿಗಳಾದ ಶ್ರೀ ಬಿ. ಸಿದ್ಧಲಿಂಗಯ್ಯರವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಇಂತಹ ರೋಮಾಂಚಕಾರಿಯಾ ನೃತ್ಯ ರೂಪಕದ ಮುಖವಾಡದ ಹಿಂದಿನ ನೈಜ ಗ್ರಾಮೀಣ ಪ್ರತಿಭೆಗಳಿಗೆ ಮತ್ತು ಸ್ಪಿಕ್ ಮ್ಯಾಕೆ ತಂಡದ ಸದಸ್ಯರಾದ ಶ್ರೀಮತಿ ಗಾಯತ್ರಿಯವರಿಗೆ ಅಭಿನಂದನೆಗಳನ್ನು ಸಲ್ಲಿಸುವ ಮೂಲಕ ಕಾರ್ಯಕ್ರಮ ಮುಕ್ತಾಯಗೊಂಡಿತು.

ವರದಿ : ಟಿ.ಸಿ. ಸುಧಾಮಣಿ

### ಆರೋಗ್ಯ ತಪಾಸಣಾ ಶಿಬಿರ

ಸೆಪ್ಟೆಂಬರ್ ೨೯ರಂದು ಸಿದ್ಧಗಂಗಾ ಪಬ್ಲಿಕ್ ಶಾಲೆಯ ಆವರಣದಲ್ಲಿ ಮಕ್ಕಳ ಆರೋಗ್ಯ ತಪಾಸಣಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದಲ್ಲಿ ಬೆಂಗಳೂರಿನ ಹೆಸರಾಂತ ಆಸ್ಪತ್ರೆಗಳಲ್ಲಿ ಒಂದಾದ ಕೆ.ಸಿ. ಜನರಲ್ ಆಸ್ಪತ್ರೆಯ ಅಧೀಕ್ಷಕರಾದ ಡಾ. ಶಂಕರಲಿಂಗಯ್ಯನವರು ಮತ್ತು ಅವರ ತಂಡದವರಾದ ಡಾ. ಜೇಮ್ಸ್, ಡಾ. ಲಕ್ಷ್ಮೀ ಹೆಗಡೆ, ಡಾ. ಅಭಿನವ್, ಡಾ. ನಾಗಣ್ಣ, ಡಾ. ನಾಗಮಾಲಿನಿ ಮತ್ತು ಡಾ. ಸುಮಾರಾಣಿಯವರು ಶಿಬಿರದಲ್ಲಿ ಭಾಗವಹಿಸಿ ಬಹಳ ಶ್ರದ್ಧೆಯಿಂದ ಮಕ್ಕಳ ಆರೋಗ್ಯ ತಪಾಸಣೆಯನ್ನು ಮಾಡಿದರು.

ಆರೋಗ್ಯದಲ್ಲಿ ತೊಂದರೆಯಿರುವ ಮಕ್ಕಳಿಗೆ ಕೆ.ಸಿ. ಜನರಲ್ ಆಸ್ಪತ್ರೆಯ ತಜ್ಞವೈದ್ಯರನ್ನು ಕಾಣಲು ಸೂಚಿಸಲಾಯಿತು. ಈ ಕಾರ್ಯಕ್ರಮವು ಸಂಸ್ಥೆಯ ಜಂಟಿ ಕಾರ್ಯದರ್ಶಿ ಮತ್ತು ಖಜಾಂಚಿಯವರಾದ ಶ್ರೀ ಸಿದ್ಧಲಿಂಗಯ್ಯನವರು, ಪ್ರಾಂಶುಪಾಲರಾದ ಶ್ರೀಮತಿ ಚಂಪಕಮಾಲಿನಿಯವರು ಮತ್ತು ಶ್ರೀ ಮಹಾದೇವಯ್ಯನವರು ಹಾಗೂ ಸಿಬ್ಬಂದಿ ವರ್ಗದವರ ಸಹಕಾರದಿಂದ ಯಶಸ್ವಿಯಾಗಿ ನಡೆಯಿತು.

ವರದಿ : ಸುಜಾತ ★

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೫೪೬. | **ಶ್ರೀ ಅವಿನಾಶ, ಅರಳಿ,**<br>ಸಹ ಪ್ರಾಧ್ಯಾಪಕರು,<br>ನಂ. ೧೦೩, ಎನ್.ಜಿ.ಇ.ಎಫ್. ಲೇ ಔಟ್,<br>೪ನೇ ಮುಖ್ಯರಸ್ತೆ, ಸಂಜಯನಗರ,<br>ಬೆಂಗಳೂರು – ೫೬೦ ೦೯೪. | ೨,೫೦೧.೦೦ |
| ೧೫೪೭. | **ಶ್ರೀ ಸೋಮಶೇಖರಯ್ಯ**<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೧೫೪೮. | **ಶ್ರೀ ಎನ್.ವಿ. ಸತ್ಯನಾರಾಯಣ**<br>ಸಹ ಶಿಕ್ಷಕರು | ೧,೦೦೧.೦೦ |
| ೧೫೪೯. | **ಶ್ರೀ ಕೆ.ಎಸ್. ಲೋಕೇಶ್**<br>ಸಹ ಶಿಕ್ಷಕರು | ೧,೦೦೧.೦೦ |
| ೧೫೫೦. | **ಶ್ರೀ ಎಸ್. ಗುರುಮೂರ್ತಿ**<br>ಸಹ ಶಿಕ್ಷಕರು | ೧,೦೦೧.೦೦ |
| ೧೫೫೧. | **ಶ್ರೀ ಎಸ್. ಗಂಗಯ್ಯ**<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೧೫೫೨. | **ಶ್ರೀ ಜಯಣ್ಣ**<br>ಸೇವಕರು | ೧,೦೦೧.೦೦ |
| | ಕ್ರ.ಸಂ. ೧೫೪೭ ರಿಂದ ೧೫೫೨ರ ವರೆಗಿನ ವಿಳಾಸ<br>**ಶ್ರೀ ಉದ್ಧಾನೇಶ್ವರ ಗ್ರಾಮಾಂತರ ಪ್ರೌಢಶಾಲೆ,**<br>ಗಟ್ಟಿಪುರ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೧೫೫೩. | **ಶ್ರೀಮತಿ ಸ್ವರ್ಣಾಂಭ ಜಿ. ಶಿವಣ್ಣನವರು**<br>ಲಿಂಕ್ ರಸ್ತೆ, ೧೪ನೇ ಕ್ರಾಸ್,<br>ಸೋಮೇಶ್ವರಪುರಂ, ತುಮಕೂರು. | ೨,೦೦೧.೦೦ |
| ೧೫೫೪. | **ಶ್ರೀ ಸಿ. ಜಯದೇವ್**<br>ಕೇರಾಫ್ ನಗರೇಶ್ವರ ಫ್ಯಾನ್ಸಿ ಸ್ಟೋರ್,<br>ಮುಖ್ಯರಸ್ತೆ, ವಿಜಯಪುರ,<br>ದೇವನಹಳ್ಳಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |
| ೧೫೫೫. | **ಶ್ರೀ ಎಂ.ಎಸ್. ಕೃಷ್ಣ**<br>'ತ್ರಿನೇತ್ರ' ನಂ. ೨೪೯,<br>ಕೆ.ಎಸ್.ಆರ್.ಟಿ.ಸಿ. ಲೇ ಔಟ್,<br>೭ನೇ ಮುಖ್ಯರಸ್ತೆ, ಜೆ.ಪಿ. ನಗರ, ೨ನೇ ಹಂತ,<br>ಬೆಂಗಳೂರು – ೫೬೦ ೦೭೮. | ೫,೦೦೦.೦೦ |
| ೧೫೫೬. | **ಶ್ರೀ ಎಂ.ಬಿ. ಅಂಗಡಿ**<br>ಎಲ್.ಐ.ಸಿ. ಏಜೆಂಟ್,<br>ಹಳೇಪೇಟೆ ಓಣಿ,<br>ಬ್ಯಾಡಗಿ – ೫೮೧೧೦೬,<br>ಹಾವೇರಿ ಜಿಲ್ಲೆ. | ೨,೦೦೫.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೫೫೭. | **ಶ್ರೀಮತಿ ಜೆ. ಶಿವಮ್ಮ**<br>ನಂ. ೬೬೨, ೨೧ನೇ ಕ್ರಾಸ್,<br>೪ನೇ ಮುಖ್ಯರಸ್ತೆ, ವಿದ್ಯಾರಣ್ಯಪುರಂ,<br>ಮೈಸೂರು-೦೮. | ೨೫,೦೦೦.೦೦ |
| ೧೫೫೮. | **ಶ್ರೀಮತಿ ಜೆ. ಶಿವಮ್ಮ**<br>ನಂ. ೬೬೨, ೨ನೇ ಕ್ರಾಸ್,<br>೪ನೇ ಮುಖ್ಯರಸ್ತೆ, ವಿದ್ಯಾರಣ್ಯಪುರಂ,<br>ಮೈಸೂರು-೦೮. | ೨೫,೦೦೦.೦೦ |
| ೧೫೫೯. | **ಶ್ರೀ ಬಿ.ಆರ್. ರಾಮಕೃಷ್ಣಯ್ಯ**<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೧೫೬೦. | **ಶ್ರೀ ಎಂ.ಸಿ. ರಾಮಚಂದ್ರಯ್ಯ**<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೧೫೬೧. | **ಶ್ರೀ ಎಸ್. ಈಶ್ವರಯ್ಯ**<br>ಹಿಂದಿ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೧೫೫೯ ರಿಂದ ೧೫೬೧ರ ವರೆಗಿನ ವಿಳಾಸ<br>**ಸುವರ್ಣಮುಖಿ ಪ್ರೌಢಶಾಲೆ,**<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು. | |
| ೧೫೬೨. | **ಶ್ರೀಮತಿ ಬಿ.ಎಸ್. ರತ್ನ**<br>ಮಾಲೀಕರು,<br>ಎ.ಆರ್. ಇಂಡಸ್ಟ್ರೀಸ್, ನಂ. ೫೩೦,<br>೭ನೇ ಮುಖ್ಯರಸ್ತೆ, ಸದಾಶಿವನಗರ,<br>ಬೆಂಗಳೂರು – ೫೬೦ ೦೮೦. | ೧೦,೦೦೦.೦೦ |
| ೧೫೬೩. | **ಶ್ರೀ ಎನ್. ತಿಮ್ಮಯ್ಯ**<br>ಸೇವಕರು,<br>ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಕಲ್ಲೂರು, ಗುಬ್ಬಿ ತಾಲ್ಲೂಕು. | ೨,೦೦೦.೦೦ |
| ೧೫೬೪. | **ಶ್ರೀ ಆರ್.ಜಿ. ಶಿವಣ್ಣ ಮತ್ತು ಕುಟುಂಬದವರು**<br>ರಂಗೇನಹಳ್ಳಿ, (ಬ್ಯಾಲಕೆರೆ)<br>ಮಾಗಡಿ ತಾ. ಬೆಂ.ಗ್ರಾ. ಜಿಲ್ಲೆ. | ೨,೧೦೧.೦೦ |
| ೧೫೬೫. | **ಹರಳೂರು ಗ್ರಾಮಸ್ಥರು**<br>ತುಮಕೂರು ತಾಲ್ಲೂಕು. | ೧,೫೦೦.೦೦ |
| ೧೫೬೬. | **ಶ್ರೀ ಕೆ.ಹೆಚ್. ಬಸವರಾಜಪ್ಪ**<br>ವೃತ್ತಿ ಶಿಕ್ಷಕರು | ೨,೦೦೧.೦೦ |
| ೧೫೬೭. | **ಶ್ರೀ ಶಿವಶಂಕರಣ್ಣ**<br>ಸೇವಕರು | ೨,೦೦೧.೦೦ |
| | ಕ್ರ.ಸಂ. ೧೫೬೬ ರಿಂದ ೧೫೬೭ರ ವರೆಗಿನ ವಿಳಾಸ<br>**ನೆಹರು ಗ್ರಾಮಾಂತರ ಪ್ರೌಢಶಾಲೆ,**<br>ಆದಿವಾಲ, ಹಿರಿಯೂರು ತಾಲ್ಲೂಕು. | |





| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೫೬೮. | **ಶ್ರೀ ಜಿ.ಎಸ್. ನಟರಾಜು**<br>ಜೆ.ಬಿ. ೭೬/೬, ಹೆಚ್.ಎಸ್.ಎಸ್.<br>ಹೋಮ್ಸ್, ೧೫ನೇ ಕ್ರಾಸ್,<br>ಮಲ್ಲೇಶ್ವರಂ, ಬೆಂಗಳೂರು-೩. | ೨,೦೦೦.೦೦ |
| ೧೫೬೯. | **ಶ್ರೀ ನರಸಿಂಹಮೂರ್ತಿ**<br>ಸೇವಕರು,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಅರೆಯೂರು, ತುಮಕೂರು ತಾ. | ೨,೦೦೧.೦೦ |
| ೧೫೭೦. | **ಶ್ರೀ ಶಿವಕುಮಾರ, ಸಂ.ಶಿ.**<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು-೨. | ೨.೦೦೧.೦೦ |
| ೧೫೭೧. | **ಶ್ರೀ ಕೆ.ಎನ್. ಭೈರಶೆಟ್ಟಿ**<br>ವೃತ್ತಿ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಆದಲಗೆರೆ, ಗುಬ್ಬಿ ತಾಲ್ಲೂಕು. | ೨,೦೦೦.೦೦ |
| ೧೫೭೨. | **ಶ್ರೀ ಕೆ. ಶಿವಪ್ರಸಾದ**<br>ಅಧ್ಯಕ್ಷರು, ಶಾರದಾ ವಿದ್ಯಾಮಂದಿರ,<br>ಲಗ್ಗೆರೆ, ಪೀಣ್ಯ, ಬೆಂಗಳೂರು-೫೮. | ೨,೦೦೧.೦೦ |
| ೧೫೭೩. | **ಶ್ರೀ ಕೆ.ಸಿ. ಸಿದ್ಧಗಂಗಯ್ಯ**<br>ವೃತ್ತಿ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು. | ೨,೦೦೦.೦೦ |
| ೧೫೭೪. | **ಶ್ರೀ ಬಿ.ಎಂ. ಶಿವರುದ್ರಯ್ಯ**<br>ದೈಹಿಕ ಶಿಕ್ಷಕರು | ೧,೦೦೦.೦೦ |
| ೧೫೭೫. | **ಶ್ರೀಮತಿ ಪಿ. ಕಾಂತಮ್ಮ**<br>ಸಹ ಶಿಕ್ಷಕರು | ೧,೦೦೦.೦೦ |
| ೧೫೭೬. | **ಶ್ರೀಮತಿ ಬೇಬಿ ಸರೋಜ**<br>ಸಹ ಶಿಕ್ಷಕರು | ೧,೦೦೦.೦೦ |
| ೧೫೭೭. | **ಶ್ರೀ ಬಿ. ಮಹಾದೇವಪ್ಪ**<br>ಸೇವಕರು | ೧,೦೦೦.೦೦ |
| | ಕ್ರ.ಸಂ. ೧೫೭೪ ರಿಂದ ೧೫೭೭ರ ವರೆಗಿನ ವಿಳಾಸ<br>**ನಿವೇದಿತಾ ಪ್ರ. ಶಾಲೆ, ಕ್ಯಾತಸಂದ್ರ, ತುಮಕೂರು ತಾಲ್ಲೂಕು.** | |
| ೧೫೭೮. | **ಶ್ರೀಮತಿ ಆರ್. ಭುವನೇಶ್ವರಿ, ಶ್ರೀ ವಿ. ಶಿವರುದ್ರಯ್ಯ**<br>ನಂ. ೧೨೦, 'ಶಿವಕೃಪ' ಸತ್ಯನಾರಾಯಣ ಬಡಾವಣೆ,<br>೨ನೇ ಹಂತ, ಮಹಾಲಕ್ಷ್ಮೀಪುರ,<br>ಬೆಂಗಳೂರು – ೮೬. | ೧೦,೦೦೦.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೫೭೯. | **ಶ್ರೀ ಮುದ್ದಾ**<br>ಮೇ: ಕೇತನ ಎಂಟರ್‌ಪ್ರೈಸಸ್,<br>೨ನೇ ಹಂತ, ೪ನೇ ಕ್ರಾಸ್,<br>ಎ.ಜಿ.ಬಿ. ಲೇ ಔಟ್, ಮಹಾಲಕ್ಷ್ಮೀಪುರ,<br>ಬೆಂಗಳೂರು-೮೬. | ೨೦,೦೦೧.೦೦ |
| ೧೫೮೦. | **ಡಾ. ಕೆ.ಟಿ. ಸುರೇಂದ್ರ**<br>ಎಂ.ಬಿ.ಬಿ.ಎಸ್. ಅರ್ಥೋಪೆಡಿಕ್ ಸ್ಪೆಷಲಿಸ್ಟ್,<br>'ನಮಸ್ಕಾರ', ನಂ. ೯೦೯, ೪೭ನೇ ಕ್ರಾಸ್,<br>೫ನೇ ಮೈನ್, ೫ನೇ ಬ್ಲಾಕ್, ಜಯನಗರ,<br>ಬೆಂಗಳೂರು – ೫೬೦ ೦೪೧. | ೧೫,೦೦೦.೦೦ |
| ೧೫೮೧. | **ಶ್ರೀ ವಿ.ಸಿ. ಮೋಹನ್**<br>ನಂ. ಬಿ.-೪, ಜಿ.ಇ.ಎಫ್. ಬ್ಲಾಕ್,<br>ಇಂಡಸ್ಟ್ರೀಯಲ್ ಟೌನ್, ರಾಜಾಜಿನಗರ,<br>ಬೆಂಗಳೂರು – ೪೪. | ೨,೦೦೦.೦೦ |
| ೧೫೮೨. | **ಶ್ರೀಮತಿ ಪಾರ್ವತಮ್ಮ ಹೊನ್ನಗಿರಿಯಪ್ಪ**<br>ಚೌಡಿ ಬೇಗೂರು, ಕುದೂರು ಹೋಬಳಿ,<br>ಮಾಗಡಿ ತಾಲ್ಲೂಕು. | ೨,೦೦೧.೦೦ |
| ೧೫೮೩. | **ಶ್ರೀ ಸಿ.ಎಸ್. ಲೋಕೇಶ್**<br>ದ್ವಿತೀಯ ದರ್ಜೆ ಸಹಾಯಕರು,<br>ಗಣೇಶ ಗ್ರಾ.ಪ.ಪೂ. ಕಾಲೇಜು,<br>ಗೂಳೂರು, ತುಮಕೂರು ತಾ. | ೨,೦೦೧.೦೦ |
| ೧೫೮೪. | **ಶ್ರೀ ಬಿ. ಸತೀಶ್ ಬಿನ್ ಬಿ.ಪಿ. ಬಸವರಾಜ**<br>ಶ್ರೀ ಸಿದ್ಧಗಂಗಾ ಕ್ವಾರ್ಟರ್ಸ್,<br>ಶ್ರೀ ಸಿದ್ಧಗಂಗಾಮಠ, ತುಮಕೂರು-೪. | ೨,೦೦೧.೦೦ |
| ೧೫೮೫. | **ಶ್ರೀಮತಿ ಸಿ.ಕೆ. ಚಂದ್ರಕಲಾ**<br>ಸಿ.ಕೆ. ಕರಿಯಪ್ಪ, ಶ್ರೀ ಮಂಜುನಾಥ ಕೃಪಾ<br>ಟಿ.ಪಿ. ಕೈಲಾಸಂ ರಸ್ತೆ, ರಾಘವೇಂದ್ರ ನಗರ,<br>ತುಮಕೂರು. | ೨,೦೦೧.೦೦ |
| ೧೫೮೬. | **ಶ್ರೀ ಎನ್. ರುದ್ರಾರಾಧ್ಯ**<br>ನಂ. ೨೮೩೬, ೮ನೇ ಮುಖ್ಯರಸ್ತೆ,<br>ಗೋಕುಲ ಬಡಾವಣೆ, ಕ್ಯಾತಸಂದ್ರ ಅಂಚೆ,<br>ತುಮಕೂರು ತಾಲ್ಲೂಕು. | ೧೦,೦೦೧.೦೦ |
| ೧೫೮೭. | **ಶ್ರೀ ಎಂ.ಜೆ. ಲಕ್ಷ್ಮಯ್ಯ**<br>ವೃತ್ತಿ ಶಿಕ್ಷಕರು,<br>ಶ್ರೀ ವಿನಾಯಕ ಸಂ.ಪ.ಪೂ. ಕಾಲೇಜು,<br>ನಿಟ್ಟೂರು, ಗುಬ್ಬಿ ತಾಲ್ಲೂಕು. | ೨,೦೦೦.೦೦ |
| ೧೫೮೭. | ಲಿಂಗೈಕ್ಯ ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮನವರು | ೬,೦೦೩.೦೦ |

*(ಮುಂದುವರೆಯುತ್ತವೆ)*

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

ಕ್ರ.ಸಂ. ಹೆಸರು ಮತ್ತು ವಿಳಾಸ ಮೊತ್ತ

೧೧೬೦. ಶ್ರೀಮತಿ ಎಸ್. ಮಂಗಳಮ್ಮ
ಪ್ರ.ಶಾ.ಸ. ೧,೦೦೦.೦೦

೧೧೬೧. ಶ್ರೀ ಶಂಭುಲಿಂಗಪ್ಪ
'ಡಿ' ಗ್ರೂಫ್ ನೌಕರರು ೧,೦೦೧.೦೦

ಕ್ರ.ಸಂ. ೧೧೬೦ ರಿಂದ ೧೧೬೧ರ ವಿಳಾಸಗಳು
ಎಸ್.ಬಿ.ಟಿ.ಟಿ.ಐ., ಶ್ರೀಮಠ.

೧೧೬೨. ಶ್ರೀಮತಿ ಅನುರಾಧ, ಶ್ರೀ ಕೆಂಕೆರೆ ರಾಮಕೃಷ್ಣ
ಚಾರಿಟಬಲ್ ಟ್ರಸ್ಟ್ (ರಿ). ದೊಡ್ಡಬಳ್ಳಾಪುರ,
ಬೆಂಗಳೂರು ಗ್ರಾ. ಜಿಲ್ಲೆ, ೨,೦೦೦.೦೦

೧೧೬೩. ಶ್ರೀ ಪರಮಶಿವಯ್ಯ
'ಡಿ' ಗ್ರೂಫ್ ನೌಕರರು ೧,೦೦೧.೦೦

೧೧೬೪. ಶ್ರೀ ಟಿ.ಸಿ. ಶಿವಕುಮಾರ್
ಸಹ ಶಿಕ್ಷಕರು ೧,೦೦೧.೦೦

೧೧೬೫. ಶ್ರೀ ಕೆ. ಬಸಬರಾಜಯ್ಯ
ಸಹ ಶಿಕ್ಷಕರು

೧೧೬೬. ಶ್ರೀ ಚಂದ್ರಶೇಖರಪ್ಪ
ಸಹ ಶಿಕ್ಷಕರು ೧,೦೦೧.೦೦

ಕ್ರ.ಸಂ. ೧೧೬೩ ರಿಂದ ೧೧೬೬ರ ವಿಳಾಸಗಳು
ಎಸ್.ಜೆ.ಆರ್.ಆರ್.ಹೆಚ್.ಎಸ್. ಯಣ್ಣೆಗೆರೆ, ಮಾಗಡಿ ತಾಲ್ಲೂಕು,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

೧೧೬೭. ಶ್ರೀ ಎ.ಹೆಚ್. ಪ್ರಸನ್ನಕುಮಾರ್
ಸಹ ಶಿಕ್ಷಕರು ೧,೦೦೧.೦೦

೧೧೬೮. ಶ್ರೀ ಶಿವರಾಜು
ಸಹ ಶಿಕ್ಷಕರು ೧,೦೦೧.೦೦

ಕ್ರ.ಸಂ. ೧೧೬೭ ರಿಂದ ೧೧೬೮ರ ವಿಳಾಸಗಳು
ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಹೆಡಕನಹಳ್ಳಿ,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

೧೧೬೯ ಶ್ರೀ ವೀರಣ್ಣ
ನಂ. ೬೪೦, ೫ನೇ ಕ್ರಾಸ್,
೮ನೇ ಮೈನ್, ಆರ್.ಪಿ.ಸಿ. ಲೇ ಔಟ್,
ವಿಜಯನಗರ, ಬೆಂಗಳೂರು–೪೦. ೧,೦೦೧.೦೦

೧೧೭೦. ಶ್ರೀ ಎನ್ ಸಾಂಬಶಿವಯ್ಯ
''ಸಾಮವೇದ'', ನಂ. ೨೨೯,
೩ನೇ ಕ್ರಾಸ್, ೨ನೇ ಬ್ಲಾಕ್, ೩ನೇ ಹಂತ,
ಬಸವೇಶ್ವರ ನಗರ, ಬೆಂಗಳೂರು. ೧೦೦೧.೦೦

ಕ್ರ.ಸಂ. ಹೆಸರು ಮತ್ತು ವಿಳಾಸ ಮೊತ್ತ

೧೧೭೧. ಶ್ರೀ ಬಸವರಾಜಯ್ಯ
ಮುಖ್ಯ ಶಿಕ್ಷಕರು ೧,೦೦೧.೦೦

೧೧೭೨. ಶ್ರೀ ಎಂ. ನಾರಾಯಣಪ್ಪ
ಸಹ ಶಿಕ್ಷಕರು ೧,೦೦೧.೦೦

೧೧೭೩. ಶ್ರೀ ಜೆ.ಸಿ. ವಿಶ್ವನಾಥ್
ಸಹ ಶಿಕ್ಷಕರು ೧,೦೦೧.೦೦

೧೧೭೪. ಶ್ರೀ ಜೆ.ಸಿ. ಮುರಡಮಠ
ಸಹ ಶಿಕ್ಷಕರು ೧,೦೦೧.೦೦

೧೧೭೫. ಶ್ರೀ ಆರ್.ಡಿ. ಕೃಷ್ಣಪ್ಪ
ಸಹ ಶಿಕ್ಷಕರು ೧,೦೦೧.೦೦

ಕ್ರ.ಸಂ. ೧೧೭೧ ರಿಂದ ೧೧೭೫ರ ವಿಳಾಸಗಳು
ಶ್ರೀ ಬಸವೇಶ್ವರ ಗ್ರಾಮಾಂತರ ಪ್ರೌಢಶಾಲೆ,
ತೋಟಗೆರೆ, ಬೆಂಗಳೂರು ಉತ್ತರ ತಾಲ್ಲೂಕು.

೧೧೭೬. ಶ್ರೀಮತಿ ಜಯಮ್ಮ
ದ್ವಿತೀಯ ದರ್ಜೆ ಸಹಾಯಕರು ೧,೦೦೧.೦೦

೧೧೭೭. ಶ್ರೀ ಲಿಂಗದೇವರು
ದ್ವಿತೀಯ ದರ್ಜೆ ಸಹಾಯಕರು ೧,೦೦೧.೦೦

ಕ್ರ.ಸಂ. ೧೧೭೬ ರಿಂದ ೧೧೭೭ರ ವಿಳಾಸಗಳು
ನಿವೇದಿತ ಪ್ರೌಢಶಾಲೆ, ಕ್ಯಾತ್ಸಂದ್ರ, ತುಮಕೂರು ತಾಲ್ಲೂಕು.

೧೧೭೮. ಶ್ರೀ ಕೆ.ಜಿ. ಮಂಜುನಾಥ
ಸಹ ಶಿಕ್ಷಕರು ೧,೦೦೧.೦೦

೧೧೭೯. ಶ್ರೀಮತಿ ಆರ್. ರುದ್ರಮ್ಮ
ಸಹ ಶಿಕ್ಷಕರು ೧,೦೦೧.೦೦

ಕ್ರ.ಸಂ. ೧೧೭೮ ರಿಂದ ೧೧೭೯ರ ವಿಳಾಸಗಳು
ಶ್ರೀ ಮಂಜುನಾಥ ಬಾಲಕಿಯರ ಪ್ರೌಢಶಾಲೆ,
ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

೧೧೮೦. ಶ್ರೀ ಕೆ. ಹನುಮೇಗೌಡ
ಸಹ ಶಿಕ್ಷಕರು,
ಶ್ರೀ ಹುತ್ತಸಿದ್ಧೇಶ್ವರ ಗ್ರಾಮಾಂತರ ಪ್ರೌಢಶಾಲೆ,
ಮಾದಿಹಳ್ಳಿ, ತುರುವೇಕೆರೆ ತಾಲ್ಲೂಕು. ೧,೦೦೧.೦೦

೧೧೮೧. ಶ್ರೀ ಡಿ.ಆರ್. ಪುಟ್ಟರಾಜು
ಸಹ ಶಿಕ್ಷಕರು ೧,೦೦೧.೦೦

೧೧೮೨. ಶ್ರೀ ಬಿ. ಮಹಾದೇವಸ್ವಾಮಿ
ಸಹ ಶಿಕ್ಷಕರು ೧,೦೦೧.೦೦

೧೧೮೩.. ಶ್ರೀಮತಿ ಸುಜಾತ
ಸಹ ಶಿಕ್ಷಕರು ೧,೦೦೧.೦೦

ಕ್ರ.ಸಂ. ೧೧೮೧ ರಿಂದ ೧೧೮೩ರ ವಿಳಾಸಗಳು
ಶ್ರೀ ಸಿದ್ಧಗಂಗಾ ಪ್ರಾಕ್ಟೀಸಿಂಗ ಎಲಿಮೆಂಟರಿ ಶಾಲೆ,
ಬಿ.ಹೆಚ್. ರಸ್ತೆ ತುಮಕೂರು.





ಕ್ರ.ಸಂ. ಹೆಸರು ಮತ್ತು ವಿಳಾಸ ಮೊತ್ತ

೧೧೮೪. ಶ್ರೀ ಎಸ್.ಎಸ್. ಸಂಕಣ್ಣನವರ್
ಸಹ ಶಿಕ್ಷಕರು,
ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,
ಗುಡೇಮಾರನಹಳ್ಳಿ, ಮಾಗಡಿ ತಾ. ೧,೦೦೦.೦೦

೧೧೮೫. ಶ್ರೀ ನಾಗರಾಜು
ನ್ಯೂ ಅಂಜು ಪರ್ನಿಚರ್,
ಶಾಪ್ ನಂ. ೭೭, ೫೦ ಅಡಿರಸ್ತೆ,
ಹನುಮಂತ ನಗರ,
ಬೆಂಗಳೂರು – ೫೬೦ ೦೫೦. ೧,೦೦೦.೦೦

೧೧೮೬. ಶ್ರೀ ಎಂ ಪುಟ್ಟಬಸಪ್ಪ
ವ್ಯವಸ್ಥಾಪಕರು,
ಸಂಪನ್ಮೂಲ ಕೇಂದ್ರ, ಮೈರಾಡ ಸಂಸ್ಥೆ
ಕಾಮಸಮುದ್ರ, ಕೋಲಾರ ಜಿಲ್ಲೆ. ೧,೦೦೧.೦೦

೧೧೮೭. ಶ್ರೀ ಹೆಚ್.ಎ. ಚಂದ್ರಶೇಖರಮೂರ್ತಿ
ನಂ. ೫/೧೨, ಡಿ.ಆರ್.ಡಿ.ಸಿ. ಕಾಂಪ್ಲೆಕ್ಸ್,
ಸಿ.ವಿ. ರಾಮನ್ ನಗರ,
ಬೆಂಗಳೂರು – ೫೬೦ ೦೯೩. ೨,೦೦೧.೦೦

೧೧೮೮. ಶ್ರೀ ವಿ. ನಾರಾಯಣರೆಡ್ಡಿ
ನಂ. ೩೫/೧, ಮಂದಾರ ನಿಲಯ,
೪ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ,
ಮಲ್ಲೇಶ್ವರಂ, ಬೆಂಗಳೂರು–೩. ೧,೦೦೦.೦೦

೧೧೮೯. ಶ್ರೀ ಎಸ್. ಚಂದ್ರಶೇಖರಯ್ಯ
ನಿವೃತ್ತ ಶಿಕ್ಷಕರು,
ಶಿರಗನಹಳ್ಳಿ, ಬಾವವಾಡಿ ಅಂಚೆ,
ಮಾಗಡಿ ತಾ. ಬೆ. ಗ್ರಾ. ಜಿಲ್ಲೆ. ೧,೦೦೧.೦೦

೧೧೯೦. ಶ್ರೀ ತಗಡೂರು ವೀರಭದ್ರಪ್ಪ
ಸಹ ಶಿಕ್ಷಕರು,
ಸರ್ಕಾರಿ ಬಾಲಕಿಯರ ಪದವಿ ಪೂ. ಕಾಲೇಜು,
ಕುಣಿಗಲ್ ತಾ. ತುಮಕೂರು ಜಿಲ್ಲೆ. ೧,೦೦೧.೦೦

೧೧೯೧. ಶ್ರೀ ಮಲ್ಲೇಶ್‌ಗೌಡ
ಲ್ಯಾಬ್ ಅಟೆಂಡರ್ ೧,೦೦೧.೦೦

೧೧೯೨. ಶ್ರೀ ಪುಟ್ಟಾಂಜನೇಯ
ಗ್ರೂಫ್ 'ಡಿ' ನೌಕರರು ೧,೦೦೧.೦೦

೧೧೯೩. ಶ್ರೀ ಎಸ್.ಎ. ಕಲ್ಲಯ್ಯ
ಗ್ರೂಫ್ 'ಡಿ' ನೌಕರರು ೧,೦೦೧.೦೦

ಕ್ರ.ಸಂ. ೧೧೯೨ ರಿಂದ ೧೧೯೩ರ ವಿಳಾಸಗಳು
ಎನ್.ಹೆಚ್.ಎಸ್. ಕ್ಯಾತ್ಸಂದ್ರ, ತುಮಕೂರು – ೫೭೨ ೧೦೪.

೧೧೯೪. ಶ್ರೀ ಸಿದ್ದಪ್ಪ
ಸೇವಕರು ೧,೦೦೦.೦೦

ಕ್ರ.ಸಂ. ಹೆಸರು ಮತ್ತು ವಿಳಾಸ ಮೊತ್ತ

೧೧೯೫. ಶ್ರೀ ಎಸ್. ಚಂದ್ರಶೇಖರಯ್ಯ
ಸೇವಕರು ೧,೦೦೦.೦೦

ಕ್ರ.ಸಂ. ೧೧೯೪ ರಿಂದ ೧೧೯೫ರ ವಿಳಾಸಗಳು
ಶ್ರೀ ವಿನಾಯಕ ಸಂಯುಕ್ತ ಪದವಿ ಪೂರ್ವ ಕಾಲೇಜು,
ನಿಟ್ಟೂರು, ಗುಬ್ಬಿ ತಾಲ್ಲೂಕು. ತುಮಕೂರು ಜಿಲ್ಲೆ.

೧೧೯೬. ಶ್ರೀ ಹೆಚ್. ನಂಜುಂಡಪ್ಪ
ನಂ. ೩೭೭, ದೇವರಾಯಪಟ್ಟಣ,
ಹೊಸಬಡಾವಣೆ, ತುಮಕೂರು. ೧,೦೦೧.೦೦

೧೧೯೭. ಶ್ರೀ ಬಿ.ಎಸ್. ಚಂದ್ರಶೇಖರಯ್ಯ
ಸಹ ಶಿಕ್ಷಕರು,
ಶ್ರೀ ಶಿವಕುಮಾರ ಸ್ವಾಮಿ ಗ್ರಾ. ಪ್ರೌ. ಶಾಲೆ,
ಬ್ಯಾಲಕೆರೆ, ಮಾಗಡಿ ತಾಲ್ಲೂಕು. ೧,೦೦೧.೦೦

೧೧೯೮. ಶ್ರೀ ಪುಟ್ಟಸ್ವಾಮಿ
ನಂ. ೨೧೧, ೫ನೇ ಅಡ್ಡರಸ್ತೆ ೧ನೇ ಮುಖ್ಯರಸ್ತೆ,
ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರ ನಗರ,
ಬೆಂಗಳೂರು – ೫೬೦ ೦೭೯. ೧,೦೦೧.೦೦

೧೧೯೯. ಶ್ರೀ ಜಿ.ಬಿ. ಮಲ್ಲಪ್ಪ
ಉಪನ್ಯಾಸಕರು ೧,೦೦೦.೦೦

೧೨೦೦. ಶ್ರೀ ಎಸ್.ಎನ್. ರವಿಶಂಕರ್
ಸಹ ಶಿಕ್ಷಕರು ೧,೦೦೧.೦೦

೧೨೦೧. ಶ್ರೀಮತಿ ಕೆ.ಪಿ. ಕವಿತ
ಸಹ ಶಿಕ್ಷಕರು ೧,೦೦೦.೦೦

ಕ್ರ.ಸಂ. ೧೨೦೦ ರಿಂದ ೧೨೦೧ರ ವಿಳಾಸಗಳು
ಶ್ರೀ ವಿನಾಯಕ ಸಂಯುಕ್ತ ಪದವಿ ಪೂರ್ವ ಕಾಲೇಜು,
ನಿಟ್ಟೂರು, ಗುಬ್ಬಿ ತಾಲ್ಲೂಕು. ತುಮಕೂರು ಜಿಲ್ಲೆ.

೧೨೦೨. ಶ್ರೀ ಎನ್. ಗೋವಿಂದರಾಜು
ಬಿನ್ ನಾರಾಯಣಪ್ಪ,
ಸಜ್ಜೆ ಹೊಸಹಳ್ಳಿ, ದೊಡ್ಡೇರಿ ಹೋಬಳಿ,
ಮಧುಗಿರಿ ತಾಲ್ಲೂಕು. ೧,೦೦೧.೦೦

೧೨೦೩. ಶ್ರೀ ವಿ.ಎಸ್. ನೀಲಕಂಠಾರಾಧ್ಯ
ಸಹ ಶಿಕ್ಷಕರು ೧,೦೦೧.೦೦

೧೨೦೪. ಶ್ರೀ ಎಸ್. ಮಲ್ಲೇಶ್
ಸಹ ಶಿಕ್ಷಕರು ೧,೦೦೧.೦೦

೧೨೦೫. ಶ್ರೀ ಜಿ.ಎಸ್. ರುದ್ರಪ್ಪ
ಸಹ ಶಿಕ್ಷಕರು ೧,೦೦೧.೦೦

೧೨೦೬. ಶ್ರೀ ಡಿ. ಶಿವಮೂರ್ತಿ
ಸಹ ಶಿಕ್ಷಕರು ೧,೦೦೧.೦೦

ಕ್ರ.ಸಂ. ೧೨೦೩ ರಿಂದ ೧೨೦೬ರ ವಿಳಾಸಗಳು
ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ,
ಶ್ರೀಮಠ, ತುಮಕೂರು ತಾಲ್ಲೂಕು.

(ಮುಂದುವರೆಯುತ್ತದೆ)

RNI No. 17139/69 "Siddaganga" Monthly - Postal Reg. No. KA/SK/TMR/385/2003-05

ತುಮಕೂರಿನಲ್ಲಿ ಇತ್ತೀಚೆಗೆ ಗ್ರಾಮಾಂತರ ಮಕ್ಕಳಿಗೆ ಗಣಕ ಅಂತರಜಾಲ ವಿಸ್ತರಣೆ ಅಂಗವಾಗಿ ಏರ್ಪಡಿಸಿದ್ದ ಸಮಾರಂಭದಲ್ಲಿ ಶ್ರೀಮಠದ ಉತ್ತರಾಧಿಕಾರಿಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ : ಸಿದ್ಧಗಂಗಾ ತಾಂತ್ರಿಕ ವಿದ್ಯಾಲಯದ ಪ್ರಾಚಾರ್ಯರಾದ ಡಾ. ಎಂ.ಎನ್. ಚನ್ನಬಸಪ್ಪ, ಗಣಕ ಪರಿಷತ್ ವಿಜ್ಞಾನಿ ಶ್ರೀ ಬಿ.ವಿ. ಶ್ರೀನಾಥ್ ಶಾಸ್ತ್ರಿಗಳು, ಜಿಲ್ಲಾಧಿಕಾರಿ ಶ್ರೀ ಎಂ.ಬಿ. ದ್ಯಾಬೇರಿ ಹಾಗೂ ಉಪ ವಿಭಾಗಾಧಿಕಾರಿ ಶ್ರೀ ಜೆ.ಎನ್. ನಾಯಕ್ ಅವರು.





ಬೆಂಗಳೂರಿನ ಶ್ರೀ ಸಿದ್ಧಗಂಗಾ ಪಬ್ಲಿಕ್ ಶಾಲೆಯ ಸಿಬ್ಬಂದಿ ವರ್ಗದವರು ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಚಂಪಕಮಾಲಿನಿ, ಆಡಳಿತಾಧಿಕಾರಿ ಶ್ರೀ ಬಿ.ವಿ. ಮಹಾದೇವಯ್ಯ ಅವರ ನೇತೃತ್ವದಲ್ಲಿ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ದರ್ಶನಾಶೀರ್ವಾದ ಪಡೆದರು.

ಪರಮಪೂಜ್ಯ ಶ್ರೀ ಶ್ರೀಗಳವರು ಇತ್ತೀಚೆಗೆ ನಡೆದ ಸಮಾರಂಭದಲ್ಲಿ 'ಶಿಕ್ಷಣದ ಬುನಾದಿ' ಕೃತಿಯನ್ನು ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಪ್ರಾಂಶುಪಾಲರಾದ ಡಾ. ಆರ್.ಸಿ. ಪುಟ್ಟಬುದ್ಧಿ, ಗ್ರಂಥಕರ್ತ ಪ್ರೊ. ಜಿ.ಎಸ್. ರೇಣುಕಪ್ಪ, ಸಹ ಲೇಖಕರುಗಳಾದ ಶ್ರೀ ಆರ್. ರುದ್ರಾರಾಧ್ಯ, ಶ್ರೀಮತಿ ಜಿ.ಬಿ. ದೇವಮ್ಮ, ಶ್ರೀಮತಿ ಆರ್. ಗಿರಿಜ ಮತ್ತು ಶ್ರೀ ಜಗದೀಶ್‌ಕುಮಾರ್ ಅವರು ಹಾಜರಿದ್ದರು.





ತುಮಕೂರಿನಲ್ಲಿ ಇತ್ತೀಚೆಗೆ ನಡೆದ ವೀರಶೈವ ಕ್ಷೇಮಾಭಿವೃದ್ಧಿ ಸಂಘದ ವಾರ್ಷಿಕ ಸಮಾರಂಭವನ್ನು ಶ್ರೀಮಠದ ಉತ್ತರಾಧಿಕಾರಿಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ಹ.ಬ. ಮಹಾದೇವಪ್ಪ ಶ್ರೀ ಎಂ. ಸಿದ್ಧರಾಮಯ್ಯ, ಶ್ರೀ ಲೇಪಾಕ್ಷಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.